श्रीवेदव्यासमहामुनिप्रणीतं

# गरुडमहापुराणम्

## (ब्रह्मकाण्डः)



संपादकः-पं. पद्मनाभाचार्यः चिटगुप्पा

प्रकाशनम्

विश्वमध्वमहाप्रतिष्ठानम्

बसवनगुडि, बेङ्गळूरु-४.

श्रीवेदव्यासमहामुनिप्रणीतं

# गरुडमहापुराणम्

## (ब्रह्मकाण्डः)

संपादकः-पं.पद्मनाभाचार्यः चिटगुप्पा एम्.ए



प्रकाशनम्

विश्वमध्वमहापरिषत्

उत्तरादिमठः,बसवनगुडि, बेङ्गळूरु-४.

श्रीवेदव्यासमहामुनिप्रणीतम्

**गरुडमहापुराणम्**(ब्रह्मकाण्डः)

अध्यायसारांश-कन्नड संक्षिप्तसारोद्धाराभ्यां संवलितम् ।

संशोधनं-सम्पादनं च श्री पद्मनाभाचार्यः चिटगुप्पा एम्.ए

*Published by :*
**Shri Vishwa Madhwa MahaParishath**
Madhwa Siddhantha Pratishtanam,
(Founded by Sri 1008 Sri Satyatmateertha Swamiji)
Uttaradi Math, Bangalore-4.
Phone : 6678726
e-mail :

First Edition :

Copies : 1000

Price :

Printers : **Vinyasa Graphics**
Bangalore.

# ಮುನ್ನುಡಿ

ಮಹೋನ್ನತವಾದ, ಅತ್ಯಗಾಧವಾದ ಅಧ್ಯಾತ್ಮವಿಶ್ವದಲ್ಲಿ ಪುರಾಣಗಳ ಪಾತ್ರ ಹಿರಿದಾದುದು. ಪುರಾಣಸಾಹಿತ್ಯವು ಅನಂತವಾದ ವೇದ, ಉಪನಿಷತ್ತುಗಳ ತತ್ತ್ವಗಳನ್ನು, ಧರ್ಮಗಳನ್ನ, ಪಂಚರಾತ್ರಾದಿ ಸಂಹಿತೆಯಲ್ಲಿರುವ ಧ್ಯಾನ, ಉಪಾಸನೆ, ಆಚಾರ, ವ್ಯವಹಾರಗಳನ್ನು, ಸ್ಮೃತಿಗ್ರಂಥಗಳಲ್ಲಿರುವ ಧರ್ಮ, ಅಧರ್ಮಗಳ ಸೂಕ್ಷ್ಮತೆಗಳನ್ನು ವಿವೇಚಿಸಿ ಸೂಕ್ತಮಾರ್ಗವನ್ನು ತೋರಿ ದಾರಿದೀಪವಾಗಿದೆ. ವಿಸ್ತೃತವಾದ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಗತಿಗಳನ್ನು, ದೇವತೆಗಳ ಸ್ವರೂಪವನ್ನು, ಲೋಕಗಳನ್ನು, ಚಕ್ರವರ್ತಿ, ರಾಜ, ಮಹಾರಾಜರುಗಳ ಇತಿಹಾಸವನ್ನು ಯುಗಧರ್ಮವನ್ನು ಹಾಗೂ ಅನೇಕ ಮೌಲಿಕ ಪ್ರಮೇಯಗಳನ್ನು ನಿರೂಪಿಸುವಲ್ಲಿ ಪುರಾಣವು ವಿಸ್ತಾರವಾದ ವಿಶ್ವಕೋಶವೆನಿಸಿದೆ. ಇದರ ಅಧ್ಯಯನದಿಂದ ಮನೋವೈಶಾಲ್ಯ, ವೈಚಾರಿಕಪ್ರಜ್ಞೆ, ಅಧ್ಯಾತ್ಮದ ಅರಿವು, ಆತ್ಮಿಕ ವಿಕಾಸ, ಪ್ರಾಪಂಚಿಕ ಪರಿಧಿಗಳ ಅನುಭೂತಿಯು ಉಂಟಾಗುವುದು. ಆದುದರಿಂದ

यदि विद्याच्चतुर्वेदान् साङ्गोपनिषदान् द्विजः ।
न चेत्पुराणं संविद्यान्नैव स स्याद्विचक्षणः ॥

ಎಂದು ಪ್ರಾಚೀನರ ಉಕ್ತಿ.

ಈ ದಿಶೆಯಲ್ಲಿ ಗಂಭೀರವಾದ, ಕಠಿಣವಾದ ವೇದೋಪನಿಷದಾದಿಗಳ ಅರ್ಥವನ್ನು ಜನಸಾಮಾನ್ಯರಿಗೂ ತಿಳಿಸುವದಕ್ಕೆ ಪುರಾಣಗಳನ್ನು ರಚಿಸಿ ಅಜಟಿಗ್ರಹಿಸಿರುವ ಬಾದರಾಯಣ ದೇವರ ಪರಮೋಪಕಾರ ವಿಶ್ವಮಾನ್ಯವಾಗಿದೆ.

ಭಗವಾನ್ ವೇದವ್ಯಾಸರು ರಚಿಸಿದ ೧೮ ಮಹಾಪುರಾಣಗಳಲ್ಲಿ, ವಿಷ್ಣು, ಕೂರ್ಮ, ಮತ್ಸ್ಯ, ವಾಯು, ಭಾಗವತ, ಗರುಡ ಎಂಬುದಾಗಿ ೬ ಸಾತ್ವಿಕ ಮಹಾಪುರಾಣಗಳು. ಅದರಲ್ಲಿಯೂ ಭಾಗವತ, ಗರುಡ ಪುರಾಣಗಳು ಶ್ರೇಷ್ಠವೆನಿಸಿವೆ. ಇವುಗಳಲ್ಲಿ ವಿಷ್ಣುವಿನ ಪಾರಮ್ಯವನ್ನು ವೇದವ್ಯಾಸರು ವಿಶೇಷವಾಗಿ ಕೊಂಡಾಡಿರುವರು.

ಗರುಡಪುರಾಣವನ್ನು ತಾರ್ಕ್ಷ್ಯಪುರಾಣ ಅಥವಾ ವೈನತೇಯಪುರಾಣ ಎಂದೂ ಕೆಲವೊಂದು ಕಡೆ ಕರೆದಿರುವರು. ಈ ಪುರಾಣದಲ್ಲಿ ಮೂರು ಅಂಶಗಳು.

೧. ಕರ್ಮಕಾಂಡ ಅಥವಾ ಆಚಾರಕಾಂಡ
೨. ಧರ್ಮಕಾಂಡ ಅಥವಾ ಪ್ರೇತಕಾಂಡ
೩. ಬ್ರಹ್ಮಕಾಂಡ

ಎಂದು. ಗರುಡಪುರಾಣದ ಶ್ಲೋಕಗಳ ಸಂಖ್ಯೆಯ ವಿಷಯದಲ್ಲಿ ಅನೇಕ ಅಭಿಪ್ರಾಯಗಳಿವೆ. ಮತ್ಸ್ಯಪುರಾಣದ ಪ್ರಕಾರ ೧೮,೦೦೦ ಶ್ಲೋಕಗಳೆಂದು, ಭಾಗವತ ಮತ್ತು ನಾರದ ಪುರಾಣಗಳ ಪ್ರಕಾರ ೧೯,೦೦೦ ಶ್ಲೋಕಗಳೆಂದು, ಅಗ್ನಿ ಪುರಾಣದ ಪ್ರಕಾರ ೮೦೦೦ ಶ್ಲೋಕಗಳೆಂದು ತಿಳಿದುಬರುತ್ತದೆ.

೧೮೯೦ನೆಯ ಇಸವಿಯಲ್ಲಿ ಕಲ್ಕತ್ತಾದಲ್ಲಿರುವ ''ಜೀವಾನಂದ'' ಎನ್ನುವವರು ೮೦೦೦ ಶ್ಲೋಕಗಳನ್ನೊಳಗೊಂಡ ಗರುಡಪುರಾಣವನ್ನು ಮುದ್ರಿಸಿದರು.

ಅದಾದ ನಂತರ ''ವಂಗವಾಸಿ'' ಪ್ರಕಾಶನದಿಂದ ಮತ್ತು ವೆಂಕಟೇಶ್ವರ ಪ್ರೆಸ್ ಮುಂಬಯಿಯಿಂದ ಈ ಪುರಾಣವು ಪ್ರಕಾಶಿತವಾಯಿತು. ಇವುಗಳಲ್ಲಿ ಕರ್ಮಕಾಂಡ-೨೪೦ ಅಧ್ಯಾಯಗಳು, ಧರ್ಮಕಾಂಡ-೪೨ ಅಧ್ಯಾಯಗಳು, ಬ್ರಹ್ಮಕಾಂಡ-೨೯ ಅಧ್ಯಾಯಗಳಿವೆ.

೧೯೬೪ ರಲ್ಲಿ ವಾರಾಣಸಿಯಿಂದ ಪ್ರೊ.ರಾಮಶಂಕರ ಭಟ್ಟಾಚಾರ್ಯರು ಈ ಪುರಾಣವನ್ನು ಪ್ರಕಾಶನಗೊಳಿಸಿದರು. ಇದು ''ಜೀವಾನಂದ'' ಪ್ರಕಾಶನವನ್ನೇ ಆಧಾರಿಸಿ ಮುದ್ರಿಸಲಾಗಿದೆ.

೧೯೦೫ರಲ್ಲಿ ಬೆಳಗಾಂವಿಯ ರಾಮತತ್ತ್ವಪ್ರಕಾಶನದಿಂದ ಗರುಡಪುರಾಣ ಬ್ರಹ್ಮಕಾಂಡವು ಮಾತ್ರ ಮುದ್ರಿತವಾಗಿದೆ. ಇದರಲ್ಲಿ ಬ್ರಹ್ಮಕಾಂಡವು ೪೦ ಅಧ್ಯಾಯಗಳನ್ನು ಒಳಗೊಂಡಿದೆ.

೧೯೮೪ರಲ್ಲಿ ನಾಗ್ ಪಬ್ಲಿಶರ್ಸ್ ದೆಹಲಿಯಿಂದ ಪುನಃ ವೆಂಕಟೇಶ್ವರ ಮುದ್ರಣಾಲಯ ಮುಂಬಯಿಯಿಂದ ಮುದ್ರಿತವಾದ ಪುರಾಣಗಳ ಪುಜಛಿ'ರ್ಮುದ್ರಣ ಮಾಡಿರುವರು.

ಉಪಲಬ್ಧವಾದ ಗರುಡಪುರಾಣದ ಬ್ರಹ್ಮಕಾಂಡದಲ್ಲಿ ೧೦ ಅಧ್ಯಾಯಗಳ ವ್ಯತ್ಯಾಸವು ಕಂಡುಬರುತ್ತಿದೆ.

ಗರುಡಪುರಾಣದ ಬ್ರಹ್ಮಕಾಂಡದಲ್ಲಿ ಅನೇಕ ಅಪೂರ್ವ ವಿಚಾರಗಳು ಕಾಣಸಿಗುತ್ತವೆ. ಉದಾಹರಣೆಗೆ :

೧. ಅತಿಸುದೀರ್ಘವಾದ ದೇವತಾರತಮ್ಯ ಹಾಗೂ ಅವರ ಅವತಾರಗಳು.

೨. ಶರೀರದ ೩೨ ಸುಲಕ್ಷಣಗಳು ಹಾಗೂ ಅವಲಕ್ಷಣಗಳು, ಆಯಾ ದೇವ, ದಾನವ, ಮಾನವರಲ್ಲಿ ಅವುಗಳ ಇರುವಿಕೆ.

೩. ಪ್ರತ್ಯೇಕವಾದ ದೈತ್ಯರ ತಾರತಮ್ಯ

೪. ಆಹಾರ ಪದಾರ್ಥಗಳ ಸಾರಾಸಾರವಿಭಾಗ, ಗ್ರಾಹ್ಯಾಗ್ರಾಹ್ಯ ವಿವರಣೆ.

೫. ವೆಂಕಟಾಚಲ, ಸ್ವಾಮಿಪುಷ್ಕರಿಣಿ, ಕುಮಾರಿಧಾರಾತೀರ್ಥ ಮತ್ತು ಸುತ್ತಮುತ್ತಲಿನ ತೀರ್ಥಗಳು, ವೆಂಕಟಗಿರಿಯ ಸೋಪಾನಾರೋಹಣದ ಮಹತ್ತ್ವ.

೬.ಜನಾರ್ದನ, ಸೀತಾರಾಮ,ಅನಂತ, ತ್ರಿವಿಕ್ರಮ ಮುಂತಾದ ಅನೇಕ ಸಾಲಿಗ್ರಾಮ ಹಾಗೂ ಪ್ರತಿಮೆಗಳ ಲಕ್ಷಣಗಳು.

೭. ದ್ರೌಪದೀನಿರ್ಣಯ, ಅವಳ ಅವತಾರಗಳ ವಿವರ, ಇತ್ಯಾದಿ ಅನೇಕ ತಾತ್ತ್ವಿಕ, ಸೈದ್ಧಾಂತಿಕ ವಿಷಯಗಳನ್ನು ನಾವು ಕಾಣಬಹುದು.

ಸುಮಾರು ಎರಡು ವರ್ಷಗಳಿಂದ ಅನೇಕ ಪುಸ್ತಕಗಳನ್ನು ನೋಡಿ, ವಿದ್ವಾಂಸರ ಜೊತೆ ಚರ್ಚಿಸಿ, ಸಂಶೋಧಿಸಿ, ಪರಿಷ್ಕರಿಸಿ ಸಾಧ್ಯವಾದಷ್ಟು ಶುದ್ಧ ಪ್ರತಿಯನ್ನು ತಯಾರು ಮಾಡಲಾಗಿದೆ. ಪ್ರತಿಯೊಬ್ಬ ಮಾಧ್ವನು ತಪ್ಪದೆ ಇದರ ಅಧ್ಯಯನವನ್ನು ಮಾಡಿ ದ್ವೈತವಾಙ್ಮಯವು ಬಾದರಾಯಣರ ವಾಣಿಯಲ್ಲಿ ಸ್ಪಷ್ಟವಾಗಿ ಬಂದಿರುವದನ್ನು ತಿಳಿದು ಹೆಮ್ಮೆ ಪಡಬಹುದಾಗಿದೆ.

ಈ ಗ್ರಂಥದ ಸಂಶೋಧನೆಗೆ ಮೂಲ ಪ್ರೇರಣೆ ನನ್ನ ಸ್ವರೂಪೋದ್ಧಾರಕ ಗುರುಗಳಾದ, ಮುಂಬಯಿಯಿ ಸತ್ಯಧ್ಯಾನ ವಿದ್ಯಾಪೀಠದ ಕುಲಪತಿಗಳಾದ ಪೂಜ್ಯ ಶ್ರೀ ವಿದ್ಯಾಸಿಂಹಾಚಾರ್ಯ ಮಹಾಹುಲಿಯವರು. ಪ್ರತಿ ಹೆಜ್ಜೆಯಲ್ಲಿಯೂ ಅನೇಕರೀತಿಯಿಂದ ಮಾರ್ಗದರ್ಶನವನ್ನು ನೀಡಿರುವರು.

ಜಗದ್ಗುರುಗಳಾದ ಶ್ರೀ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರನ್ನು ಭೇಟಿಯಾಗಿ ಈ ಕಾರ್ಯವನ್ನು ಮಾಡುವದಕ್ಕಾಗಿ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದಾಗ ಪೂರ್ಣಾನುಗ್ರಹದಿಂದ ಮಂತ್ರಾಕ್ಷತೆಯನ್ನು ಕೊಟ್ಟು, ಶ್ರೀಮಠದಿಂದ ಪ್ರಾಚೀನ ಪುಸ್ತಕಗಳನ್ನು ಒದಗಿಸಿದರು. ಈ ಗ್ರಂಥವು ಉತ್ತರಾದಿಮಠದ ಸಂಸ್ಥೆಯಾದ ''ವಿಶ್ವ ಮಧ್ವ ಮಹಾಪರಿಷತ್''ನಿಂದ ಪ್ರಕಾಶಿತವಾಗಲಿ ಎಂದು ಹೃತ್ಪೂರ್ವಕವಾಗಿ ಆಶೀರ್ವದಿಸಿದರು. ಪ್ರತಿ ಹಂತದಲ್ಲಿಯೂ ಈ ಗ್ರಂಥವನ್ನು ನೋಡಿ ಅನೇಕ, ಅಮೂಲ್ಯ ಆದೇಶವನ್ನು ನೀಡಿರುವರು.

ಈ ಪರಿಶ್ರಮದ ಹಿಂದೆ ಬೆಂಗಾವಲಾಗಿ ನಿಂತು ಅನುಗ್ರಹಿಸಿದ ಶಕ್ತಿಗಳು ನಾಲ್ಕು. ಜಗದ್ಗುರುಗಳಾದ ಶ್ರೀ ಸತ್ಯಪ್ರಮೋದ ತೀರ್ಥರು, ಶ್ರೀ ಸತ್ಯಾತ್ಮತೀರ್ಥರು, ಮತ್ತು ನನ್ನ ಗುರುಗಳಾದ ಶ್ರೀ ಮಾಹುಲಿ ಪರಮಾಚಾರ್ಯರು ಹಾಗೂ ಪೂಜ್ಯ ವಿದ್ಯಾಸಿಂಹಾಚಾರ್ಯರು. ಆದುದರಿಂದ ಈ ಗ್ರಂಥದ ಸಮಗ್ರ ಶ್ರೇಯಸ್ಸು ಅವರಿಗೆ ಸೇರಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುವೆ.

ಈ ಗ್ರಂಥ ಪ್ರಕಾಶನ ಹಾಗೂ ಮುದ್ರಣಕ್ಕೆ ನಮ್ಮ ಆತ್ಮೀಯರಾದ ಶ್ರೀ ಗೋವಿಂದ ಸೂಳಿಭಾವಿಯವರು ತಮ್ಮ ತಂದೆಯವರಾದ ದಿವಂಗತ ಶ್ರೀ ರಮಾಕಾಂತ ಜಿ. ಸೂಳಿಭಾವಿಯವರ ಸ್ಮಾರಕವಾಗಿ ಸೇವಾರೂಪವಾಗಿ ಧನಸಹಾಯವನ್ನು ಮಾಡಿರುವರು. ಅವರಿಗೆ ಹಾಗೂ ಅವರ ಕುಟುಂಬದವರಿಗೆ ಭಗವಂತನು ದೀರ್ಘವಾದ ಆಯುರಾರೋಗ್ಯಗಳನ್ನು ಕರುಣಿಸಲಿ ಎಂದು ಪ್ರಾರ್ಥಿಸುವೆ.

*ಪಂ. ಪದ್ಮನಾಭಾಚಾರ್ಯ ಚಿಟಗುಪ್ಪ*

॥ श्रीदिग्विजयरामो विजयते ॥

# आशीर्वचनम्



भगवता बादरायणेन रचितमिदं गरुडपुराणम् । भगवन्महिमादिरूपप्रमेयगर्भितमिति सुप्रसिद्धम् । परं तु अस्य शुद्धं पुस्तकं नोपलब्धमासीत् । तस्य शोधनं विधाय अस्मत्प्रियशिष्याः पं.पद्मनाभाचार्याः मुद्रणमकार्षुः । संशोधने रुचिमन्तः एते सदा संशोधननिरताः । एतादृशकार्याणि इतोऽप्यतिशयेन एतैः भवेयुः इत्यस्मदुपास्यमूलरामदिग्विजयरामाभिन्नवेदव्यासं प्रार्थयामहे ।

इत्यनेकनारायणस्मरणानि

२१-९-२०००
विक्रमनामसंवत्सरः

**श्रीसत्यात्मतीर्थश्रीचरणाः**

|| ಶ್ರೀದಿಗ್ವಿಜಯರಾಮೋ ವಿಜಯತೇ ||

''ಗರುಡ ಪುರಾಣ–ಬ್ರಹ್ಮಕಾಂಡ'' ಈ ಗ್ರಂಥದ ಮುದ್ರಣಕ್ಕೆ ಧನಸಹಾಯವನ್ನು ಶ್ರೀಗೋವಿಂದ ಸೂಳಿಭಾವಿಯವರು ತಮ್ಮ ತೀರ್ಥರೂಪರಾದ ಶ್ರೀರಮಾಕಾಂತ ಸೂಳಿಭಾವಿಯವರ ಸ್ಮಾರಕವಾಗಿ ಮಾಡಿರುವರು. ಅವರಿಗೆ ಅಸ್ಮದುಪಾಸ್ಯ ಶ್ರೀಮೂಲದಿಗ್ವಿಜಯರಾಮಾಭಿನ್ನ ಶ್ರೀವೇದವ್ಯಾಸದೇವರು ಆಯುರಾರೋಗ್ಯ–ಐಶ್ವರ್ಯಾಭಿವೃದ್ಧಿಯನ್ನು, ವಿಶೇಷವಾಗಿ ಜ್ಞಾನ, ಭಕ್ತಿ, ವೈರಾಗ್ಯಾದಿಗಳನ್ನು ಕೊಟ್ಟು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರು
ಉತ್ತರಾದಿ ಮಠ

## ಪರಿವಿಡಿ


| | ಪುಟ |
|---|---|
| ಗರುಡಪುರಾಣದ ಸಂಕ್ಷಿಪ್ತಸಾರೋದ್ಧಾರ(ಕನ್ನಡ) | 1–11 |
| ಅಧ್ಯಾಯಸಾರಾಂಶ(ಸಂಸ್ಕೃತದಲ್ಲಿ) | 12–28 |
| ಮೂಲಗ್ರಂಥ | ೧–೨೮೫ |

# ಗರುಡಪುರಾಣ ಬ್ರಹ್ಮಕಾಂಡದ
# ಸಂಕ್ಷಿಪ್ತ ಸಾರೋದ್ಧಾರ

ಭಗವಾನ್ ಬಾದರಾಯಣರು ರಚಿಸಿದ ಪುರಾಣಪ್ರಪಂಚವು ಅತಿವಿಶಾಲವಾದುದು. ತೀರ್ಥಕ್ಷೇತ್ರಗಳ ವೈಶಿಷ್ಟ್ಯವನ್ನು ಭೂಗೋಲ-ಖಗೋಲಗಳ ವೈಶಾಲ್ಯವನ್ನು ವ್ರತನಿಯಮಗಳ ಅವಶ್ಯಕತೆಯನ್ನು, ಇತಿಹಾಸದ ಸತ್ಯತೆಯನ್ನು, ವರ್ಣಾಶ್ರಮಾದಿ ಧರ್ಮಗಳ ಪ್ರಾಚೀನತೆಯನ್ನು, ಉಪನಿಷತ್ತು ಹಾಗೂ ವೇದಾದಿಗಳ ತತ್ವವಿಚಾರವನ್ನು, ದೇವದಾನವಾದಿಗಳ ಕರ್ಮ ಹಾಗೂ ಸ್ವರೂಪವನ್ನು, ರಾಜಮಹಾರಾಜರುಗಳ ತ್ಯಾಗ ಹಾಗೂ ಋಷಿದೇವಾದಿಗಳ ತಪಸ್ವಿತೆಯನ್ನು, ಯುಗಧರ್ಮಗಳ ಪರಿಚಯವನ್ನು, ಸಮಗ್ರವಿಶ್ವದ ಸೃಷ್ಟಿ, ಸ್ಥಿತಿ, ಸಂಹಾರಾದಿಗಳ ವಿವರಣೆಯನ್ನು ಸ್ವರ್ಗ, ನರಕ, ಮುಕ್ತಿ ಇತ್ಯಾದಿ ಸಾವಿರಾರು ತತ್ವಗಳ ನಿಶ್ಚಯವನ್ನು ಮಾಡುವ ಅಪೂರ್ವವಾದ ನಿಧಿ. ಇದರ ಅಧ್ಯಯನದಿಂದ ಮನೋವೈಶಾಲ್ಯ, ಭಗವಂತನ ಮಹಾಮಹಿಮೆ, ಪ್ರಪಂಚದ ಅರಿವು, ಕರ್ತವ್ಯದ ಜಾಗೃತಿ, ಶ್ರದ್ಧೆ ಸಾತ್ವಿಕಪ್ರಜ್ಞೆ ಪ್ರತಿಯೊಬ್ಬ ಮಾನವನಲ್ಲಿ ಒಡಮೂಡುತ್ತವೆ.

ವೇದವ್ಯಾಸರು ರಚಿಸಿದ ೧೮ ಮಹಾಪುರಾಣಗಳಲ್ಲಿ ಗರುಡಪುರಾಣವು ಒಂದು. ಸಾತ್ವಿಕಪುರಾಣಗಳ ಸಾಲಿನಲ್ಲಿ ಇದನ್ನು ಸೇರಿಸಲಾಗಿದೆ. ಇದರಲ್ಲಿ ೧.ಕರ್ಮಕಾಂಡ, ೨. ಪ್ರೇತಕಾಂಡ, ೩, ಬ್ರಹ್ಮಕಾಂಡವೆಂದು ಮೂರು ಭಾಗಗಳಿವೆ. ವಿಷ್ಣುಸರ್ವೋತ್ತಮತ್ವ, ದೇವತಾತಾರತಮ್ಯ, ಜಗತ್ತಿನ ಸತ್ಯತ್ವ, ನಿತ್ಯ ಮತ್ತು ನಿವೃತ್ತ ಕರ್ಮಗಳ ಆಚರಣೆಯ ವೈಶಿಷ್ಟ್ಯ, ಭಗವಂತನ ಹಾಗೂ ಇತರ ದೇವತೆಗಳ ಅವತಾರ, ಆವೇಶಾದಿಗಳು, ವಿಧಿನಿಷೇಧಾದಿಗಳ ವಿವೇಕ, ದೈತ್ಯರ ಸ್ವರೂಪ, ತಾರತಮ್ಯ ಅವರ ವ್ಯಾಪಾರ, ಜಗತ್ತಿನ ಸೃಷ್ಟಿ, ಜೀವರ ಸ್ವರೂಪ, ಗ್ರಾಹ್ಯ-ಅಗ್ರಾಹ್ಯ ಸಾರಾಸಾರ ವಸ್ತುಗಳ ವಿವೇಕ, ತೀರ್ಥಕ್ಷೇತ್ರಗಳ ವೈಶಿಷ್ಟ್ಯ ಮುಂತಾದ ಅನೇಕ ಅತ್ಯಾವಶ್ಯಕವಾದ ವಿಚಾರಗಳು ಬ್ರಹ್ಮಕಾಂಡದಿಂದ ನಮಗೆ ತಿಳಿದು ಬರುತ್ತವೆ.

ಯಾವುದೇ ಕಾರ್ಯವನ್ನು ಪ್ರಾರಂಭಿಸುವ ಮೊದಲು ನಾರಾಯಣನನ್ನು ನಮಿಸಬೇಕು. ತರುವಾಯ ಲಕ್ಷ್ಮೀ, ವಾಯು ಮುಂತಾದ ದೇವತೆಗಳ ನಮನ, ನಮಸ್ಕಾರದ ಔಚಿತ್ಯ. ಪುರಾಣಗಳ ಸಂಖ್ಯೆ ಅವುಗಳಲ್ಲಿ ಸಾತ್ವಿಕಾದಿ ವಿಭಾಗ, ಸಾತ್ವಿಕಪುರಾಣಗಳಲ್ಲಿಯೂ ಭಾಗವತ, ವಿಷ್ಣುಪುರಾಣ, ಗರುಡ ಪುರಾಣಗಳ ಶ್ರವಣದ ಆವಶ್ಯಕತೆ.

ವೇದಾದಿ ಸಕಲ ಶಬ್ದಸಮೂಹವು ವಿಷ್ಣುವಿನ ಸ್ತುತಿರೂಪ. ಯಾವ ಶಬ್ದಗಳೂ ಪರಮ ಮುಖ್ಯವೃತ್ತಿಯಿಂದ ಇತರರನ್ನು ವರ್ಣಿಸಲಾರವು. ನಿರವಧಿಕ ಗುಣಪೂರ್ಣನಾದ ವಿಷ್ಣುವೇ ಪೌರುಷೇಯ ಮತ್ತು ಅಪೌರುಷೇಯ ನಾಮಗಳಿಂದ ವಾಚ್ಯನು. वेदाक्षराणि यावन्ति पठितानि द्विजातिभिः । तावन्ति हरिनामानि ಭಗವಂತನ ಮೂಲ ಹಾಗೂ ಅವತಾರ ರೂಪಗಳು ಪ್ರತಿಯೊಂದು ಪರಿಪೂರ್ಣವಾಗಿವೆ. ಅವುಗಳಲ್ಲಿ ನ್ಯೂನತೆಯು ಕೂಡದು. ಅನಂತ ಜೀವರಾಶಿಗಳಿಗೆ ಪರಮಾತ್ಮನೇ ಬಿಂಬನು. ಸ್ತ್ರೀ ಮತ್ತು ಪುರುಷರೂಪಗಳನ್ನು ಹೊಂದಿದವನು. ಮನುಷ್ಯನಲ್ಲಿರುವ ವಿಕಾರವು ಅವನಲ್ಲಿಲ್ಲ. ಭಗವಂತನಿಗೆ ನಪುಂಸಕರೂಪವಿಲ್ಲ. ನಿರ್ದೋಷನಾದ ವಿಷ್ಣುವಿಗೆ ದೋಷದಿಂದ ಕೂಡಿದ ಈ ರೂಪ ಹೇಗಿರಲು ಸಾಧ್ಯ ? ಜೀವರು ಭಗವಂತನಿಂದ ಭಿನ್ನರು ಹಾಗೂ ಅವನ ಪ್ರತಿಬಿಂಬರು. ವಾಯುಬ್ರಹ್ಮರು ನೇರವಾಗಿ ಪ್ರತಿಬಿಂಬರು. ಅವರಿಗೆ ಗರುಡಾದಿಗಳು ಪ್ರತಿಬಿಂಬರು. ಅವರಿಗೆ ಇಂದ್ರಕಾಮಾದಿಗಳು ಹೀಗೆ ತೃಣಾಂತ ಜೀವರುಗಳವರೆಗೆ ಬಿಂಬಪ್ರತಿಬಿಂಬ-ಭಾವವನ್ನು ತಿಳಿಯಬೇಕು. ಸಂಸಾರದಿಂದ ಬಿಡುಗಡೆಯನ್ನು ಪಡೆಯಬೇಕಾದವನು ಶ್ರೀಹರಿಯು ತನಗೆ ಸ್ವಾಮಿ, ಸರ್ವರಿಗೂ ಒಡೆಯ, ಗುಣಪೂರ್ಣ, ದೋಷದೂರ ಇತ್ಯಾದಿಗುಣಗಳುಳ್ಳವನೆಂದು ಉಪಾಸನೆಗೈಯಬೇಕು.

ಸೃಷ್ಟಿಗಿಂತ ಮೊದಲು ವೇದಾಭಿಮಾನಿ ಶ್ರೀದೇವಿಯು ವಿಷ್ಣುವನ್ನು ಅನಂತವೇದಗಳಿಂದ ಕೊಂಡಾಡುವಳು. ಶ್ರೀಮನ್ನಾರಾಯಣನು ಪ್ರಸನ್ನನಾಗಿ ಸೃಷ್ಟಿಯನ್ನು ಮಾಡಲು ಇಚ್ಛಿಸಿ ಕಾರ್ಯೋನ್ಮುಖನಾಗುವನು. ಸತ್ವ, ರಜಸ್ಸು ಮತ್ತು ತಮಸ್ಸು ಈ ಗುಣಗಳನ್ನು ಸೃಜಿಸಿ ಅವುಗಳ ಮಿಶ್ರಣವನ್ನು ಮಾಡುವನು. ಆ ರಾಶಿಯಿಂದ ಬ್ರಹ್ಮದೇವನಿಂದ ಅಭಿಮನ್ಯಮಾನವಾದ ಮಹತ್ತತ್ತ್ವವನ್ನು ಅದರಿಂದ ವೈಕಾರಿಕ, ತೈಜಸ, ತಾಮಸವೆಂದು ಮೂರು ಪ್ರಭೇದಗಳನ್ನೊಳಗೊಂಡ ರುದ್ರದೇವರ ಅಭಿಮಾನಕ್ಕೊಳಗಾದ ಅಹಂಕಾರ ತತ್ತ್ವವನ್ನು ಸೃಜಿಸಿದನು. ಅಹಂಕಾರ ತತ್ತ್ವದಿಂದ ದೇವತೆಗಳ ಶರೀರ, ಇಂದ್ರಿಯಗಳು, ತನ್ಮಾತ್ರ, ಪಂಚಭೂತಗಳು ಜನಿಸಿದವು. ಆಯಾ ತತ್ವಗಳಿಗೆ ಅಭಿಮಾನಿದೇವತೆಗಳು ಭಗವಂತನಿಂದ ಹುಟ್ಟಿದರು.

ಅನಾದಿಕಾಲದಿಂದ ಸರ್ವಜ್ಞನಾದ ನಾರಾಯಣನಿಗೆ ಅಜ್ಞಾನಲೇಶವೂ ಇಲ್ಲ. ಜೀವನು ಅನಾದಿಕಾಲದಿಂದ ದೋಷ, ಅಜ್ಞಾನಾದಿಗಳಿಂದ ಕೂಡಿದವನು, ಪರಬ್ರಹನು ಅಣುವಿಗಿಂತಲೂ ಅಣು. ಮಹತ್ತಾದ ಆಕಾಶಕ್ಕಿಂತಲೂ ಮಹೀಯನು. ಜೀವ, ಜಡ, ಪರಮಾತ್ಮರಲ್ಲಿರುವ ಪಂಚಭೇದಗಳು ನಿತ್ಯವಾಗಿವೆ. ಭೇದಪಂಚಕವು

ಸಮಗ್ರವಿಶ್ವದಲ್ಲಿ ಪ್ರಕೃಷ್ಟವಾಗಿ ತೋರುವದರಿಂದಲೇ ಇದನ್ನು ಪ್ರಪಂಚವೆಂದು ಕರೆಯಲಾಗಿದೆ.

ವಾಯುದೇವರು ವಿಷ್ಣುವನ್ನು ಸ್ತುತಿಸುತ್ತ '' ಓ ದೇವನೇ'', ಸಜ್ಜನರ ಕಷ್ಟವನ್ನು ಕಳೆಯುವದು ನಿನ್ನ ಅವತಾರದ ಉದ್ದೇಶ. ನಿನ್ನನ್ನು ಎಷ್ಟು ವರ್ಣಿಸಿದರೂ ನಿನ್ನ ಮಹಿಮೆ ಮುಗಿಯದು. ಅಚ್ಛಿನ್ನಭಕ್ತನಾದ ಎನಗೆ ಸರ್ವಕಾಲದಲ್ಲಿ ನಿನ್ನನ್ನು ಭಜಿಸುವ ಶಕ್ತಿಯನ್ನು ನೀಡು ಎಂದು ಕೇಳಿದನು. ಸರಸ್ವತಿಯು ಭಗವಂತನನ್ನು ಆರಾಧಿಸುತ್ತ, ''ಭಗವಂತನೇ ಹರಿವಾಯುಗಳು ಸರ್ವಕಾಲದಲ್ಲಿ ಸಮವಾದ ಬುದ್ಧಿಯುಳ್ಳವರು, ಅವರ ವಿಚಾರಗಳಲ್ಲಿ ವಿರೋಧವೇ ಇಲ್ಲ. ವಾಯುದೇವರು ಸಂಸಾರದಲ್ಲಿದ್ದರೂ ಇತರ ಸಂಸಾರಿಗಳಂತೆ ದುಃಖಿಗಳಲ್ಲ. ಸರ್ವದಾ ಹರಿಪ್ರವಣರು'' ಎಂದು ಸ್ತುತಿಸಿದಳು.

ಅನಂತರದಲ್ಲಿ ಶೇಷ, ಗರುಡ, ರುದ್ರ, ವಾರುಣಿ, ಸೌಪರ್ಣಿ, ಪಾರ್ವತಿ, ಇಂದ್ರ, ಕಾಮ, ಆಹಂಕಾರಿಕ ಪ್ರಾಣ, ಶಚಿ, ರತಿ, ದಕ್ಷ, ಬೃಹಸ್ಪತಿ, ಅನಿರುದ್ಧ, ಸ್ವಾಯಂಭುವ ಮನು, ಪ್ರವಹವಾಯು, ಯಮ, ಶತರೂಪಾ, ಚಂದ್ರ, ಸೂರ್ಯ, ವರುಣ, ನಾರದ, ಭೃಗು, ಅಗ್ನಿ, ಪ್ರಸೂತಿ, ವಶಿಷ್ಠ, ಮರೀಚಿ, ಅತ್ರಿ, ಅಂಗಿರ, ಪುಲಸ್ತ್ಯ ಪುಲಹ, ಕ್ರತು, ವೈವಸ್ವತ ಮನು, ವಿಶ್ವಾಮಿತ್ರ ಮುಂತಾದ ಸಕಲ ದೇವತೆಗಳು ಭಗವಂತನನ್ನು ಸ್ತುತಿಸಿದರು.

ಬ್ರಹ್ಮಾಂಡವು ಐವತ್ತು ಕೋಟಿ ವಿಸ್ತಾರವಾದುದು. ಅದರ ಮೇಲೆ ಐವತ್ತು ಕೋಟಿ ಸುವರ್ಣಾವಯವ. ಅದರ ಮೇಲೆ ಜಲಾದಿ ಸಪ್ತ ಆವರಣಗಳು ಕ್ರಮವಾಗಿ ಎರಡೆರಡು ಪಟ್ಟು ಅಧಿಕವಾಗಿವೆ. ಅಂತಿಮಾವರಣ ಹಾಗೂ ಅವ್ಯಾಕೃತಾಕಾಶಗಳ ಮಧ್ಯದಲ್ಲಿ ವಿರಜಾನದಿಯಿದೆ. ಪುಣ್ಯತಮವಾದ ಐದು ಯೋಜನವಿಸ್ತೀರ್ಣವಾದ ಈ ನದಿಯಲ್ಲಿ ಮುಕ್ತಿಯನ್ನು ಪಡೆಯುವ ಜೀವರುಗಳು ಚತುರ್ಮುಖನೊಡನೆ ಸ್ನಾನಗೈದು ಮುಕ್ತರಾಗುವರು. ವಿರಜೆಯು ಭಗವಂತನ ಬೆವರಿನ ರೂಪಳು. ವಾಯುಬ್ರಹ್ಮರಿಗೆ ೩೨ ಲಕ್ಷಣಗಳಿವೆ. ರುದ್ರಪದವಿಗೆ ಬರುವವರಿಗೆ ೨೮ ಲಕ್ಷಣಗಳು. ಇಂದ್ರಾದಿ ದೇವತೆಗಳಿಗೆ ೨೪ ರಿಂದ ೧೬ ಲಕ್ಷಣಗಳು ಇರುವುವು. ಋಷಿಗಳಿಗೆ ೮ರವರೆಗೆ ಲಕ್ಷಣಗಳಿರುವುವು. ಚಕ್ರವರ್ತಿಗಳಿಗೆ ಅದಕ್ಕಿಂತ ಕಡಿಮೆಯಿರುತ್ತದೆ.

ಚತುರ್ಮುಖ ಬ್ರಹ್ಮನಿಗೆ ಒಂದು ನೂರು ಕಲ್ಪಗಳ ಮೊದಲು ಅಪರೋಕ್ಷಜ್ಞಾನ' ಸಂಭವಿಸುವುದು. ೯೯ನೆಯ ಕಲ್ಪದಲ್ಲಿ ವಾಯುಪದವಿ, ೧೦೦ನೆಯ ಕಲ್ಪದಲ್ಲಿ ಬ್ರಹ್ಮಪದವಿ ಸಿಗುವದು. ರುದ್ರದೇವರಿಗೆ ೪೦ ಕಲ್ಪಗಳು, ಇಂದ್ರನಿಗೆ ೨೦ ಕಲ್ಪಗಳು, ಸೂರ್ಯಾದಿಗಳಿಗೆ ೧೦ ಕಲ್ಪಗಳು. ಸಾಧನ ಸಮಾಪ್ತಿ ನಂತರ ಎಲ್ಲರು ಚತುರ್ಮುಖ ಬ್ರಹ್ಮನ ಜತೆ ಮುಕ್ತಿಯನ್ನು ಪಡೆಯುವರು.

ಜೀವರನ್ನು ಆಚ್ಛಾದನಗೊಳಿಸುವ ಪ್ರಕೃತಿಯು ಎರಡು ವಿಧವಾಗಿವೆ. ೧.ಜೀವಾಚ್ಛಾದಿಕಾ ೨.ಪರಮಾಚ್ಛಾದಿಕಾ ಎಂದು. ಜೀವಾಚ್ಛಾದಿಕೆಯೆಂಬ ಪ್ರಕೃತಿಯನ್ನು ಕಳೆದು ಪರಮಾಚ್ಛಾದಿಕೆಯೆಂಬ ಪ್ರಕೃತಿಯನ್ನು ದೂರ ಸರಿಸು ಎಂದು ಲಕ್ಷ್ಮಿಯು ಭಗವಂತನನ್ನು ಪ್ರಾರ್ಥಿಸುವಳು. ಭಗವಂತನು ಧರಿಸಿದ ಆಯುಧಗಳು ಎರಡು ವಿಧವಾಗಿವೆ. ಒಂದು ಭಗವತ್ಸ್ವರೂಪ, ಇನ್ನೊಂದು ಭಗವಂತನಿಂದ ಬೇರೆ. ಅವುಗಳಿಗೆ ದೇವತೆಗಳು ಅಭಿಮಾನಿಗಳಾಗಿರುವರು. ವಾಯುಬ್ರಹ್ಮರಿಗೆ ಅಜ್ಞಾನ, ಸುಷುಪ್ತಿಗಳು ಇಲ್ಲ. ಭಗವದಿಚ್ಛೆಯಿಂದ ಅವುಗಳನ್ನು ಜೀವರಿಗೆ ಕೊಡುವರು. ಶ್ರೀಹರಿಯನ್ನು ಬಿಟ್ಟು ಇತರ ಬ್ರಹ್ಮಾಂಡದ ವಿಷಯದಲ್ಲಿ ಆಲೋಚನ ಮಾಡಿದ ಮಾತ್ರಕ್ಕೆ ಸಕಲವನ್ನು ತಿಳಿಯುವರು. ಲಕ್ಷ್ಮೀನಾರಾಯಣರ ವಿಷಯದಲ್ಲಿ ಮಾತ್ರ ಪೂರ್ಣವಾಗಿ ತಿಳಿಯಲಾರರು. ಬ್ರಹ್ಮದೇವರು ಸೃಷ್ಟಿಯ ಆದಿಯಲ್ಲಿ ''ತಪ'' ಎಂಬ ಎರಡಕ್ಷರವನ್ನು ಆಕಾಶವಾಣಿಯಿಂದ ತಿಳಿದು ಭಗವಂತನನ್ನು ಆರಾಧಿಸಿ ವಿಷ್ಣುವಿನ ದರ್ಶನವನ್ನು ಪಡೆದು ಸೃಷ್ಟಿಯನ್ನು ಆರಂಭಿಸಿದರು. ವಾಯುದೇವರಿಗೆ ಶರೀರವಿದ್ದರೂ ಅಭಿಮಾನವಿಲ್ಲದಿರುವದರಿಂದ ''ಅಶರೀರಿ'' ಎಂದು ಕರೆಯುವರು. ಭಗವಂತನ ವಿಷಯದಲ್ಲಿ ಎಂದಿಗೂ ಅಜ್ಞಾನ, ವಿಪರೀತಜ್ಞಾನಗಳಿಲ್ಲ. ಆದ್ದರಿಂದ ಋಜುಗಳೆಂದು ಅವರನ್ನು ಕರೆದಿರುವರು. ಇತರ ದೇವತೆಗಳಿಗಿರುವಂತೆ ಅಸುರಾವೇಶ, ಅಸುರಬಾಧೆಗಳಿಲ್ಲ. ಭಾರತಿದೇವಿಯೂ ವಾಯುದೇವರಂತೆ ಅಸುರಾವೇಶರಹಿತಳು. ಭಗವಂತನ ವಿಷಯದಲ್ಲಿ ಶುದ್ಧಳು.

ಒಂದು ಬ್ರಹ್ಮಕಲ್ಪದಲ್ಲಿ ಒಬ್ಬನು ಕಲಿ. ಋಜುಪದವಿಗೆ ಬರುವ ದೇವತೆಗಳಂತೆ ಕಲಿಪದವಿಗೆ ಬರುವ ದೈತ್ಯರ ಗುಂಪು ಇದೆ. ಬ್ರಹ್ಮದೇವರ ಒಂದು ಕಲ್ಪದಲ್ಲಿ ಅನೇಕದೈತ್ಯರು ತಮ್ಮ ಸಾಧನ ಪೂರ್ಣಗೊಳಿಸಿ ತಮಸ್ಸನ್ನು ಪ್ರವೇಶಿಸುತ್ತಾರೆ. ವಾಯುದೇವರ ಗದಾಪ್ರಹಾರದಿಂದ ಇವರಿಗೆ ಲಿಂಗಭಂಗವಾಗುತ್ತದೆ. ಕಲಿ, ಅಲಕ್ಷ್ಮಿ, ವಿಪ್ರಚಿತ್ತಿ, ಕಾಲನೇಮಿ, ಮಧುಕೈಟಭರು, ನರಕ, ಹಿರಣ್ಯಕಶಿಪು, ಹಿರಣ್ಯಾಕ್ಷ, ಮಣಿಮಾನ್, ಬಕ, ತಾರಕ, ಶಂಬರ, ಹಿಡಿಂಬ, ಬಾಣ, ನಮುಚಿ, ಧೇನುಕ, ಪೂತನಾ, ಅರಿಷ್ಟ, ಲವಣ, ಪೌಂಡ್ರಕ ಮೊದಲಾದ ದೈತ್ಯರು ತಾರತಮ್ಯಾನುಗುಣವಾಗಿ ಹರಿ, ವಾಯು, ದೇವತಾದ್ರೋಹದಿಂದ ತಮ್ಮ ಸಾಧನೆಯನ್ನು ಪೂರ್ಣಮಾಡಿಕೊಳ್ಳುವರು.

ಭಗವಂತನು ತನ್ನ ಶರೀರಾವಯವಗಳಿಂದ ಅನೇಕ ದೇವತೆಗಳನ್ನು, ಬ್ರಾಹ್ಮಣಾದಿವರ್ಣಗಳನ್ನು, ಯಜ್ಞಸಾಮಗ್ರಿ ಮುಂತಾದವುಗಳನ್ನು ಹುಟ್ಟಿಸಿದನು. ಭಗವಂತನ ಹಸ್ತಪಾದಾದಿ ಶರೀರಾವಯವಗಳು, ಕೇಶಲೋಮಾದಿಗಳು ಎಲ್ಲವೂ ಪರಿಪೂರ್ಣ ಹಾಗೂ ಅನಂತವಾಗಿವೆ. ಭಗವಂತನು ಸಂಸಾರದಲ್ಲಿದ್ದರೂ

ಸ್ವಭೋಗ್ಯವಾದ ಸ್ವಾಖ್ಯರಸಾದಿಗಳನ್ನು ಅನುಭವಿಸುವನು. ಜೀವಭೋಗ್ಯವಾದುದನ್ನು ಭಗವಂತನು ಭೋಗಿಸುವುದಿಲ್ಲ.

ಭಗವಂತನಿಗೆ ನಿವೇದಿತವಾಗದ ಹಾಗೂ ನಿಷಿದ್ಧವಾದ ಪದಾರ್ಥಗಳು ಅಸಾರವೆನಿಸುವುವು. ಕೆಲವು ಪದಾರ್ಥಗಳು ಕೆಲಕಾಲದ ನಂತರ ಅಸಾರವೆನಿಸುವುವು. ಬಾಳೆಯ ಹಣ್ಣು ನಾಲ್ಕುದಿನಗಳವರೆಗೆ ಸಾರ, ಅನಂತರ ಅಸಾರ, ಹಲಸು ೧ ತಿಂಗಳವರೆಗೆ ಸಾರ, ಖರ್ಜೂರ ಆರು ತಿಂಗಳವರೆಗೆ ಸಾರ, ತೆಂಗಿನಕಾಯಿ ಒಂದು ದಿನದವರೆಗೆ ಸಾರ, ತಾಂಬೂಲ ಒಂದು ಘಂಟೆಯವರೆಗೆ ಸಾರ, ಅನ್ನ, ಸಾರು ಇತ್ಯಾದಿಗಳು ಒಂದು ಯಾಮದವರೆಗೆ ಸಾರವೆನಿಸುವವು. ತೈಲ ಮತ್ತು ಪಕ್ವಪದಾರ್ಥಗಳು ನಾಲ್ಕು ಯಾಮಗಳವರೆಗೆ ಸಾರ. ಇನ್ನೂ ಕೆಲವು ಫಲಗಳು ೩ ಅಥವಾ ೬ ತಿಂಗಳವರೆಗೆ ಸಾರವೆನಿಸುವವು.

ತುಲಸಿಯು ಸರ್ವಕಾಲದಲ್ಲಿ ಸಾರವು. ಏಕಾದಶ್ಯಾದಿ ಉಪವಾಸದಿನಗಳಲ್ಲಿ ಕೇವಲ ಆಘ್ರಾಣವ ಹೊರತು ಸೇವನೆಯಿಲ್ಲ. ಏಕಾದಶಿಯ ದಿನ ಸ್ವಾದೂದಕತೀರ್ಥವು ಅಸಾರವೆನಿಸಿದೆ. ಚಾತುರ್ಮಾಸ್ಯದಲ್ಲಿ ಆಯಾ ಪದಾರ್ಥಗಳು ಅಸಾರವೆನಿಸಿದೆ. ತುಲಸಿಮಾಲೆಯಿಲ್ಲದ ಶರೀರವು ಅಸಾರ. ಊರ್ಧ್ವಪುಂಡ್ರವಿಲ್ಲದ ನಾರಿಯು ನಿಸ್ಸಾರಳು. ಹರಿನಾಮವಿಲ್ಲದ ನಾಲಿಗೆಯು ನಿಸ್ಸಾರವು. ಕುಂಕುಮವು ಮೂರುವರ್ಷ ಸಾರ. ಕಸ್ತೂರಿ ಹತ್ತು ವರ್ಷ ಸಾರ, ಕರ್ಪೂರ ಒಂದು ವರ್ಷ ಸಾರ, ಚಂದನವು ಸರ್ವದಾ ಸಾರವಾಗಿದೆ. ಇದಲ್ಲದೆ ಸರ್ವಕಾಲದಲ್ಲಿ ನಿಸ್ಸಾರವಾದ ದ್ರವ್ಯಗಳನ್ನು ಭಗವಂತನಿಗೆ ನಿವೇದಿಸಕೂಡದು, ಭಕ್ಷಣವಂತೂ ಸರ್ವಥಾ ನಿಷೇಧಿಸಲಾಗಿದೆ.

ಮಹಾವಿಷ್ಣುವು ಜಗತ್ತಿನ ಉದ್ಧಾರಕ್ಕಾಗಿ, ದೇವತಾಕಾರ್ಯಕ್ಕಾಗಿ ಅನಿರುದ್ಧಾದಿ, ಮತ್ಸ್ಯಾದಿ, ದತ್ತ ವ್ಯಾಸಕಪಿಲಾದಿ ರೂಪಗಳನ್ನು ಸ್ವೀಕರಿಸಿರುವನು. ವಿಷ್ಣುವಿನಮಡದಿ ಮಹಾಲಕ್ಷ್ಮಿಯು ತಾನೂ ಸಹ ಶಾಂತಿ, ಜಯಾ, ಸೀತಾ ಇತ್ಯಾದಿ ಅನಂತರೂಪಗಳನ್ನು ಧರಿಸಿ ಭಗವಂತನನ್ನು ಸೇವಿಸುವಳು.

ವಾಯುಬ್ರಹ್ಮರು ಸಂಸಾರದಲ್ಲಿದ್ದರೂ ಸುಖವನ್ನೇ ಅನುಭವಿಸುವರು. ರುದ್ರೇಂದ್ರಾದಿ ದೇವತೆಗಳು ಸುಖವನ್ನನುಭವಿಸುವರು. ಕೆಲವೊಂದು ಬಾರಿ ದುಃಖವನ್ನು ಅನುಭವಿಸುವಾಗ ದೈತ್ಯರ ಆವೇಶವಿದೆಯೆಂದು ತಿಳಿಯಬೇಕು. ದೇವತೆಗಳಿಗೆ ಎಂದಿಗೂ ನರಕಾದಿಗಳಿಲ್ಲ. ಹಾಗೆಯೇ ದೈತ್ಯರಿಗೆ ಸ್ವಾಭಾವಿಕವಾದ ಸುಖದ ಅನುಭವವಿಲ್ಲ. ಕೆಲವೊಂದು ಬಾರಿ ಸುಖವು ಉಂಟಾದರೆ ಅದು ದೇವತೆಗಳ ಆವೇಶದಿಂದಾಗಿ ತಿಳಿಯಬೇಕು. ವಾಯುದೇವರಿಗೆ ಮಾತ್ರ ಅವತಾರತ್ರಯದಲ್ಲಿ ಗರ್ಭವಾಸ, ಶುಕ್ಲಶೋಣಿತಾದಿ ಸಂಬಂಧವಿಲ್ಲ. ವಾಯುದೇವರ ಅವತಾರವಾದ

ಶ್ರೀಮಧ್ವಾಚಾರ್ಯರನ್ನು ದೂಷಿಸಲು ಮಣಿಮಂತನು ಕಾಲಡಿ ಗ್ರಾಮದಲ್ಲಿ ಸಂಕರನಾಗಿ ಹುಟ್ಟಿ ಮಾಯಾವಾದ ಮತವನ್ನು ಪ್ರಚಾರಗೊಳಿಸುವನು. ಮುಂದೆ ಮಧ್ವಾಚಾರ್ಯರು ಅವತರಿಸಿ ಆ ಮತವನ್ನು ಖಂಡಿಸಿ ಪುನಃ ದ್ವೈತಮತವನ್ನು ಸ್ಥಾಪಿಸುವರು.

ಭಾರತಿದೇವಿಯು ಶಚಿ, ಶ್ಯಾಮಲಾ, ಉಷಾ ಮತ್ತು ಉಮಾ ಎಂದು ನಾಲ್ಕು ದೇವತಾಸ್ತ್ರೀಯರಿಂದೊಡಗೂಡಿ ಭೂಮಿಯಲ್ಲಿ ಜನಿಸುವಳು. ಇವಳಿಗೆ ಕಾಳಿ, ವಿಪ್ರಕನ್ಯಾ, ನಳನಂದಿನಿ, ದ್ರೌಪದಿ, ಚಂದ್ರಾ ಇತ್ಯಾದಿ ಅವತಾರಗಳಿವೆ. ದ್ವಾಪರದಲ್ಲಿ ಪಾಂಡವರ ಪತ್ನಿಯಾಗುವಳು. ಅವಳಿಗಿರುವ ಪಂಚಪತಿತ್ವ ಪ್ರಮಾಣಸಿದ್ಧವಾದುದು.

ರುದ್ರದೇವರು ಉಗ್ರ, ಕಪರ್ದಿ, ದೂರ್ವಾಸ, ಶುಕ, ಅಶ್ವತ್ಥಾಮ, ಜೈಗೀಷವ್ಯ ಮೊದಲಾದ ರೂಪಗಳನ್ನು ಹೊಂದಿರುವರು. ಮುಕ್ತಿಯಲ್ಲಿಯೂ ಭೇದವು ಮತ್ತು ತರತಮಭಾವವು ಇರುವುದು. ಎಲ್ಲರ ಆನಂದವು ಒಂದೇ ತೆರನಾದುದಿಲ್ಲ. ಆದರಲ್ಲಿ ತಾರತಮ್ಯವುಂಟು. ಜ್ಞಾನ, ಸಾಧನ ಹಾಗೂ ಸ್ವರೂಪಗಳ ತಾರತಮ್ಯದಿಂದ ಆನಂದದಲ್ಲಿ ತಾರತಮ್ಯವನ್ನಂಗೀಕರಿಸಬೇಕು.

ಭಗವಂತನು ತನ್ನ ಸ್ವರೂಪವನ್ನು ಹಾಗೂ ಬ್ರಹ್ಮಾಂಡದ ಪರಮಾಣುವಿನ ಅನಂತಾಂಶಗಳನ್ನೂ ಸಮಗ್ರವಾಗಿ ತಿಳಿದಿರುವನು. ಲಕ್ಷ್ಮೀದೇವಿಯು ಬ್ರಹ್ಮಾಂಡದ ಅನಂತಾಂಶಗಳನ್ನು ಆಲೋಚನೆಯಿಲ್ಲದೆಯೂ ಸಂಪೂರ್ಣ ಅರಿತಿರುವಳು. ಪರಬ್ರಹ್ಮನ ವಿಷಯದಲ್ಲಿ ಮಾತ್ರ ಪೂರ್ಣವಾಗಿ ತಿಳಿದಿಲ್ಲ. ಬ್ರಹ್ಮವಾಯುಗಳು ಜಗತ್ತಿನ ಜ್ಞಾನವನ್ನು ಆಲೋಚಿಸಿದಾಗ ಪೂರ್ಣವಾಗಿ ಪಡೆಯುವರು. ಮುಂದಿನ ದೇವತೆಗಳು ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾಗಿ ಜಗತ್ತಿನ ಜ್ಞಾನವನ್ನು ಪಡೆದಿರುವರು.

ಶ್ರೀಕೃಷ್ಣನ ಷಣ್ಮಹಿಷಿಯರಲ್ಲಿ ಒಬ್ಬಳಾದ ನೀಲಾದೇವಿಯು ಕೃಷ್ಣನನ್ನು ಪತಿಯನ್ನಾಗಿ ಪಡೆಯುವದಕ್ಕೆ ಪೂರ್ವಜನ್ಮದಲ್ಲಿ ಇತರ ಪತಿಗಳೆಲ್ಲರೂ ಅಲ್ಪರು ತ್ರಿಗುಣಬದ್ಧರು. ಭಗವಂತನೇ ನನಗೆ ಪತಿಯಾಗಲೆಂದು ಸಾವಿರಾರು ವರ್ಷಗಳವರೆಗೆ ತಪಸ್ಸನ್ನಾಚರಿಸಿ ವೆಂಕಟಾಚಲಪತಿಯಿಂದ ವರವನ್ನು ಪಡೆದಳು. ಕುಮಾರಿಯಾದ ಇವಳು ತಪವನ್ನಾಚರಿಸಿದ ಕಾರಣ ಆ ತೀರ್ಥಕ್ಕೆ ''ಕುಮಾರಿಧಾರಾ ತೀರ್ಥ''ವೆಂದು ಹೆಸರು ಬಂದಿತು. ಮುಂದಿನ ಜನ್ಮದಲ್ಲಿ ಸಂಸ್ಕಾರಾತ್ಪೂರ್ವದಲ್ಲಿ ಆ ನೀಲೆಯು ಶ್ರೀಕೃಷ್ಣನ ಮಡದಿಯಾದಳು. ಭದ್ರಾ-ಮಿತ್ರವಿಂದೆಯರು ಭಗವಂತನನ್ನು ಆರಾಧಿಸಿ ದೇಹವೆಲ್ಲವೂ ಭಗವಂತನಿಗಾಗಿಯೇ ಮೀಸಲು ಎಂದು ಭಾವಿಸಿ ಆ ದೇಹವನ್ನು ತೊರೆದು ಮರುಜನ್ಮದಲ್ಲಿ ಶ್ರೀಕೃಷ್ಣನ ಮಡದಿಯರಾದರು.

ಶರೀರದಲ್ಲಿ ೩೨ ಲಕ್ಷಣಗಳಿರುತ್ತವೆ. ಅವು ಪೂರ್ಣವಾಗಿ, ನಿರವಧಿಕ ಸ್ಪಷ್ಟವಾಗಿ ನಾರಾಯಣನಲ್ಲಿ, ತರುವಾಯ ಸ್ಪಷ್ಟತೆಯಲ್ಲಿ ಸ್ವಲ್ಪ ಕಡಿಮೆಯಾಗಿ ಲಕ್ಷ್ಮೀದೇವಿಯಲ್ಲಿ, ಇನ್ನೂ ಕಡಿಮೆಯಾಗಿ ಬ್ರಹ್ಮ, ವಾಯು, ಸರಸ್ವತಿ, ಭಾರತಿಯರಲ್ಲಿ ಇರುತ್ತವೆ. ಹೀಗೆ ೩೨ ಲಕ್ಷಣಗಳು ಈ ದೇವತೆಗಳಲ್ಲಿ ಮಾತ್ರ ಇವೆ. ಇತರ ದೇವತೆಗಳಲ್ಲಿ ಕಡಿಮೆಯಾಗಿ ಇವೆ. ಮನುಷ್ಯರವರೆಗೂ ಎಷ್ಟು ಲಕ್ಷಣಗಳು ಇರುವುವೆಂದು ತಿಳಿಸಿ, ಹಾಗೆಯೇ ಶರೀರದ ದುರ್ಲಕ್ಷಣಗಳನ್ನು ವಿವರವಾಗಿ ತಿಳಿಸಿ ಅವುಗಳು ದೈತ್ಯರಲ್ಲಿ ತಾರತಮ್ಯಾನುಸಾರವಾಗಿ ಇರುವವೆಂದೂ ಹೇಳಲಾಗಿದೆ. ರುದ್ರಾದಿ ದೇವತೆಗಳಲ್ಲಿಯೂ ಕೆಲವೊಂದು ದುರ್ಲಕ್ಷಣಗಳು ಇವೆ. ಈ ದುರ್ಲಕ್ಷಣಗಳು ಮೋಕ್ಷದಲ್ಲಿ ಜ್ಞಾನ, ಆನಂದಗಳ ಹ್ರಾಸಕ್ಕೆ ಕಾರಣವಾಗಿವೆಯೆಂದು ಅವುಗಳ ವಿಸ್ತಾರವಾದ ವಿವರಣೆಯಿದೆ.

ಪೂರ್ವಜನ್ಮದಲ್ಲಿ ಸೋಮಪುತ್ರಿ ಜಾಂಬವತಿಯು ಸರ್ವಪ್ರಕಾರಗಳಿಂದಲೂ ಭಗವಂತನನ್ನು ಆರಾಧಿಸಿದಳು. ಶೇಷಾಚಲವನ್ನು ಸೇರಿ ಭಗವಂತನನ್ನು ಕಾಣುವದಕ್ಕಾಗಿ ಕಠೋರತಪವನ್ನಾಚರಿಸಿದಳು. ಕಪಿಲತೀರ್ಥದಲ್ಲಿ ಸ್ನಾನವನ್ನಾಚರಿಸಿ ಜೈಗೀಷವ್ಯರಿಂದ ವಿಷ್ಣುವಿನ ಅನೇಕ ಮಾಹಾತ್ಮ್ಯವನ್ನು ಕೇಳುತ್ತಾ ಆ ಪರ್ವತದ ಸೋಪಾನವನ್ನು ಏರಿದಳು. ಸೋಪಾನವನ್ನು ಗಂಧಾದಿಗಳಿಂದ ಪೂಜಿಸಿ, ಅಲ್ಲಿ ಶಾಲಿಗ್ರಮವನ್ನಿಟ್ಟು ನಮಸ್ಕರಿಸಿ ಸೋಪಾನವನ್ನು ಏರುತ್ತಿದ್ದಳು. ಹೀಗೆ ಪ್ರತಿಯೊಂದು ಮೆಟ್ಟಲಿನ ಪೂಜೆಯನ್ನು ಮಾಡುತ್ತ ಏರಿದಳು. ಸಮಗ್ರಪರ್ವತವು ಶಾಲಿಗ್ರಾಮದಂತೆ ಪವಿತ್ರವೆಂದು ಭಾವಿಸಿ ಮೊಳಕಾಲಿನಿಂದ ಪರ್ವತಾರೋಹಣವನ್ನು ಮಾಡಿದಳು. ಜೈಗೀಷವ್ಯರು ಅನೇಕ ಭಗವದ್ಭಕ್ತರ ಮಾಹಾತ್ಮ್ಯವನ್ನು ಭಗವಂತನ ಗುಣಗಳನ್ನು ವರ್ಣಿಸುತ್ತಿದ್ದರು.

ನಿಷ್ಕಾಮಭಾವದಿಂದ ವಿಷ್ಣುವನ್ನು ಪೂಜಿಸಬೇಕು. ಭಗವಂತನ ಎಲ್ಲ ನಾಮಗಳು ಅವನ ಮಹಿಮೆಯನ್ನು ಕೊಂಡಾಡುವವು. ಸಕಲ ತೀರ್ಥ, ಕ್ಷೇತ್ರಗಳಲ್ಲಿ ಭಗವಂತನ ಸನ್ನಿಧಾನವುಂಟು. ನೆಲ, ನೀರು, ಬೆಂಕಿ, ಗಾಳಿ, ಆಕಾಶ, ವನ, ಗಿರಿ, ಗ್ರಾಮ, ಗುಹೆ ಎಲ್ಲೆಡೆಯಲ್ಲಿ ಭಗವಂತನಿದ್ದು ಸರ್ವರನ್ನು ಅನೇಕರೂಪಗಳಿಂದ ಸಂರಕ್ಷಿಸುವನು. ಭಗವಂತನನ್ನು ಪೂಜಿಸುವಾಗ ಆವರಣ, ಪೀಠ ದೇವತೆಗಳನ್ನು ಪೂಜಿಸಿ ಪರಿವಾರಸಮೇತವಾಗಿ ಅರ್ಚಿಸಬೇಕು. ''ಓಂ ನಮೋ ವೇಂಕಟೇಶಾಯ'' ಎಂಬ ಅಷ್ಟಾಕ್ಷರಮಂತ್ರವನ್ನು ಉಪದೇಶಿಸಿ, ನಾಮದ ನಿರ್ವಚನ ಮಾಡಿ ಅದರ ಮಹತ್ವವನ್ನು ಅರುಹಿದರು. ಹಗಲು-ರಾತ್ರಿಗಳನ್ನು ಕೇವಲ ಹರಿನಾಮ ಚಿಂತನೆಯಲ್ಲಿಯೇ ಜಾಂಬವತಿ ಕಳೆಯುತ್ತಿದ್ದಳು.

ವೆಂಕಟೇಶನು ಭಕ್ತರನ್ನು ಅನುಗ್ರಹಿಸಲಿಕ್ಕಾಗಿ ವೈಕುಂಠವನ್ನು ಬಿಟ್ಟು ಈ ಪರ್ವತದಲ್ಲಿ ಬಂದು ನೆಲೆಸಿರುವನು. ಈ ಕ್ಷೇತ್ರವು ಭೂವೈಕುಂಠವೆಂದು ವಿಶ್ರುತವಾಗಿದೆ. ದೇವತೆಗಳು ಸಹ ಈ ಕ್ಷೇತ್ರವನ್ನು ಸಮಗ್ರವಾಗಿ ವರ್ಣಿಸಲಾರರು. ಸ್ವಾಮಿ ಪುಷ್ಕರಿಣೀ ತೀರ್ಥವು ಸಕಲ ತೀರ್ಥಗಳ ಸನ್ನಿಧಿಯಿಂದ ಕೂಡಿದೆ. ಮೂರುವರೆ ಕೋಟಿ ತೀರ್ಥಗಳ ಸನ್ನಿಧಿಯಿಂದ ಕೂಡಿದೆ. ಮೂರುವರೆ ಕೋಟಿ ತೀರ್ಥಗಳ ಸನ್ನಿಧಿಯಿಂದ ಕೂಡಿದ ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನ ಮಾಡುವ ಮಾತ್ರದಿಂದ ನರನು ಸರ್ವಪಾಪಗಳಿಂದ ಮುಕ್ತನಾಗುವನು. ಸ್ವಾಮಿಪುಷ್ಕರಿಣಿಯ ಸುತ್ತಲೂ ವಾಯುತೀರ್ಥ, ಮಧ್ವತೀರ್ಥ, ಚಂದ್ರತೀರ್ಥ, ಕುಬೇರತೀರ್ಥ, ಬ್ರಹ್ಮತೀರ್ಥ, ವಹ್ನಿತೀರ್ಥ, ಯಮತೀರ್ಥ, ನಿರ್ಋತಿತೀರ್ಥ, ಇತ್ಯಾದಿ ಅನೇಕ ತೀರ್ಥಗಳಿವೆ. ಜನಾರ್ದನ ಶಾಲಿಗ್ರಾಮ, ವರಾಹ, ನೃಸಿಂಹ, ಲಕ್ಷ್ಮೀನಾರಾಯಣ, ದಧಿವಾಮನ, ತ್ರಿವಿಕ್ರಮ, ಷಟ್‌ಚಕ್ರ ಸೀತಾರಾಮ, ವಾಸುದೇವ, ಪಟ್ಟಾಭಿರಾಮ, ಅನಂತ ಇತ್ಯಾದಿ ಅನೇಕ ಶಾಲಿಗ್ರಾಮಗಳ ಲಕ್ಷಣ, ಸ್ವರೂಪಗಳನ್ನು ಹಾಗೂ ಮೂರ್ತಿಗಳ ಲಕ್ಷಣಗಳನ್ನು ತಿಳಿದು ಈ ತೀರ್ಥಗಳಲ್ಲಿ ಇವುಗಳನ್ನು ದಾನ ಮಾಡಿದರೆ ಅಥವಾ ಪೂಜೆ ಮಾಡಿದರೆ ಅನಂತವಾದ ಫಲ ದೊರೆಯುವುದು.

ವೆಂಕಟೇಶನ ನೈವೇದ್ಯವು ಸರ್ವರಿಂದಲೂ ಗ್ರಾಹ್ಯವು. ಯಾರೂ ಪರಿತ್ಯಜಿಸಬಾರದು. ತನಗೆ ಅದು ಪ್ರಶಸ್ತವೆನಿಸದಿದ್ದಲ್ಲಿ ಕಲ್ಲುಸಕ್ಕರೆ, ಉತ್ತತ್ತಿ ಇತ್ಯಾದಿರೂಪವಾದ ನೈವೇದ್ಯವನ್ನಾದರೂ ಸ್ವೀಕರಿಸಬೇಕು.

ಈ ವಿಧವಾಗಿ ಜಾಂಬವತಿ ಭಗವಂತನನ್ನು ಪೂಜಿಸಿ, ಜನ್ಮಾಂತರದಲ್ಲಿ ಜಾಂಬವಂತನ ಪುತ್ರಿಯಾಗಿ ಶ್ರೀಕೃಷ್ಣನ ಮಡದಿಯಾದಳು. ಷಣ್ಮಹಿಷಿಯರಲ್ಲಿ ಜಾಂಬವತಿಯಲ್ಲಿ ಲಕ್ಷ್ಮಿಯ ಸನ್ನಿಧಾನವು ಅಧಿಕವಾದುದರಿಂದ ಅವಳು ಉತ್ತಮಳು.

ಇಂದ್ರ, ಕಾಮ, ಸ್ಕಂದ ಮುಂತಾದ ದೇವತೆಗಳು ಶಚಿ, ರತಿ ಮೊದಲಾದ ದೇವತಾಸ್ತ್ರೀಯರು ವಿಷ್ಣುವಿನ ಆಜ್ಞಾನುಸಾರವಾಗಿ ಭೂಮಿಯಲ್ಲಿ ಅವತಾರಗಳನ್ನು ಪಡೆದು ಭೂಭಾರಹರಣರೂಪಕಾರ್ಯದಲ್ಲಿ ಭಗವಂತನಿಗೆ ಅಂಗರಾಗಿರುವರು.

ಸಂಸಾರದಲ್ಲಿ ಭಾರ್ಯೆಯರು ಎರಡು ವಿಧರು. ದುಷ್ಟರಾದ ಭಾರ್ಯೆಯರು ವಿಷ್ಣು, ವೈಷ್ಣವರ, ಅಶ್ವತ್ಥ, ತುಲಸಿ, ಗೋವುಗಳ ಪೂಜೆಯನ್ನು ನಿಷೇಧಿಸಿ ಅಧರ್ಮಮಾರ್ಗದಲ್ಲಿ ನಮ್ಮನ್ನು ಎಳೆದೊಯ್ಯುವರು. ವಿಷ್ಣುವನ್ನು ತೊರೆದು ಚಂಡಿಕಾ, ಭೈರವ, ಬನದಾ, ಮಾರಿಗದ ಮುಂತಾದ ದೇವತೆಗಳನ್ನು ಸರ್ವೋತ್ತಮರೆಂದು ಉಪಾಸನೆ ಮಾಡಲು ಪ್ರಚೋದಿಸುವರು.

ಸರ್ವೋತ್ತಮನಾದ ನಾರಾಯಣನನ್ನೇ ಸರ್ವರೂ ಸರ್ವಕಾಲದಲ್ಲಿ ಪೂಜಿಸಬೇಕು. ಅನ್ಯದೇವತೋಪಾಸನೆ ಸರ್ವಥಾ ಮಾಡಕೂಡದು. ಸರ್ವಾಂತರ್ಯಾಮಿಯಾದ ಭಗವಂತನನ್ನು ಅರ್ಚಿಸಬೇಕು. ಆತನೇ ಸರ್ವರಿಗೂ ಫಲಪ್ರದನು.

ದುರ್ಬುದ್ಧಿರೂಪಳಾದ ಭಾರ್ಯೆಯ ವಿಷ್ಣುನೈವೇದ್ಯ, ನಿರ್ಮಾಲ್ಯಾದಿಗಳನ್ನು ನಾನು ಸೇವಿಸಲಾರೆನು. ಏಕಾದಶಿ, ವ್ರತ ನಿಯಮಾದಿಗಳನ್ನು, ವೈಷ್ಣವಚಿಹ್ನವಾದ ಗಂಧ, ಗೋಪೀಚಂದನಮುದ್ರಾದಿಗಳನ್ನು ನಾನು ಧರಿಸುವದಿಲ್ಲ. ಧರ್ಮ, ಯಜ್ಞ, ಹರಿಕಥಾಶ್ರವಣಗಳಿರುವ ಮನೆಯಲ್ಲಿ ನಾನಿರಲಾರೆನೆಂದು ಬಿಟ್ಟು ಹೋಗುವಳು.

ಯಮನ ಅವತಾರನಾದ ಸತ್ಯಜಿತನು ವಿಷ್ಣುವೇ ಸರ್ವಕರ್ತಾ ಜೀವನಿಗೆ ಸಾಮರ್ಥ್ಯವಿಲ್ಲ, ಕರ್ತೃತ್ವವಿಲ್ಲವೆಂದು ಹೇಳಲು ವಾಯುದೇವರು ಉತ್ತರಿಸಿದರು. ಭಗವಂತನೇ ಸ್ವತಂತ್ರಕರ್ತಾ ಇದು ಸತ್ಯ. ಆದರೂ ಜೀವನಿಗೆ ಜಡ ವೈಲಕ್ಷಣ್ಯವಿದೆ. ಪರಾಧೀನಕರ್ತೃತ್ವವಿದೆ. ಇದು ಶೃತಿ, ಸ್ಮೃತಿಗಳಿಂದ ಸಿದ್ಧವಾಗಿದೆ. ಆದುದರಿಂದ ಭಗವದಾಜ್ಞಾರೂಪವಾದ ವಿಧಿನಿಷೇಧಗಳನ್ನರಿತು ವಿಹಿತಕರ್ಮವನ್ನು ಆಚರಿಸುತ್ತ ನಿಷೇಧವನ್ನು ಪರಿತ್ಯಜಿಸಬೇಕು. ಪ್ರತ್ಯಕ್ಷಾದಿ ಅನುಭವದಿಂದ ಜೀವನ ಕರ್ತೃತ್ವವು ಸಿದ್ಧವಾಗಿದೆ. ಇದನ್ನು ಅಪಲಾಪ ಮಾಡುವಂತಿಲ್ಲ. ಭಗವಂತನೇ ಸರ್ವರಿಗೂ ಫಲಪ್ರದನೆಂದು ಸಮರ್ಥಿಸಿದರು. ಜಾಂಬವಂತ, ಯುಧಿಷ್ಠಿರ, ವಿದುರ, ಸತ್ಯಜಿತ ಇವು ಯಮಧರ್ಮನ ಅವತಾರಗಳು.

ಇಂದ್ರ, ಸೂರ್ಯ, ಅಗ್ನಿ, ಭೃಗು, ವಿಶ್ವಾಮಿತ್ರ, ಅತ್ರಿ, ಪುಲಹ, ಕ್ರತು, ತಾರಾ, ನಿರ್ಋತಿ ಇತ್ಯಾದಿ ದೇವತೆಗಳ ಹಾಗೂ ಬ್ರಹ್ಮಪುತ್ರರಾದ ಋಷಿಗಳ ತಾರತಮ್ಯ, ಅವತಾರ, ಕಾರ್ಯಗಳ ನಿರೂಪಣೆ, ಲೌಕಿಕವಾದ ಹರಿದ್ರಾ, ಕುಂಕುಮ, ತಿಲಕ, ಪುಷ್ಪಮಾಲಾ, ಮಾಂಗಲ್ಯ, ವಸ್ತ್ರಧಾರಣೆಗಿಂತ ಅಲೌಕಿಕವಾದ ವಿಷ್ಣು ಸರ್ವೋತ್ತಮನೆಂಬ ಕಂಠಸೂತ್ರ, ಬ್ರಹ್ಮವಾಯುಗಳೆಂಬ ವಸ್ತ್ರವನ್ನು, ಗಾಯತ್ರಿ ಎಂಬ ಹರಿದ್ರಾ, ರುದ್ರಶೇಷರೆಂಬ ಕುಂಕುಮ, ಗರುಡನೆಂಬ ಧೂಪ, ವಾರುಣಿಯೆಂಬ ಗಂಧ, ಸೌಪರ್ಣಿಯೆಂಬ ಸುವರ್ಣಾಭರಣವನ್ನು ಪಾರ್ವತಿಯೆಂಬ ಮಾಲೆಯನ್ನು ಧರಿಸಬೇಕು. ಇದರಿಂದ ಈ ಎಲ್ಲಾ ದೇವತೆಗಳ ತಾರತಮ್ಯಜ್ಞಾನ, ಇವರ ಸ್ಮರಣೆ ಅತ್ಯಾವಶ್ಯಕವೆಂದು ತಿಳಿದು ಬರುತ್ತದೆ. ಗರ್ಭದಲ್ಲಿಯೇ ಭಗವಂತನ ಸ್ತುತಿ ಭಗವಂತನ ಮಾಯಾಪಾಶದ ವರ್ಣನೆ ಸಂಸಾರದಿಂದ ಉದ್ಧಾರವನ್ನು ಪಡೆಯವದಕ್ಕಾಗಿ ಜೀವನಿಂದ ಪ್ರಾರ್ಥನೆ, ಯೋಗ್ಯರಿಗೆ ಮಾತ್ರ ಭಗವಂತನ ಜ್ಞಾನ. ಉಳಿದವರಿಗೆ ಭೂಮಿಯ ಸ್ಪರ್ಶದಿಂದ ಮತ್ತೆ ಅಜ್ಞಾನ ವಿಸ್ಮೃತಿಗಳು, ಸಂಸಾರ ದುಃಖವುಂಟಾಗುವುದು.

ಪ್ರಹ್ಲಾದನು ಶಾಪದಿಂದ ಅಸುರಪುತ್ರನಾಗಿ ಜನಿಸಿದ, ವಾಯುದೇವರ ವಿಶೇಷ ಆವೇಶದಿಂದಾಗಿ ನಾರದರಿಗಿಂತ ಅಧಮ, ಆವೇಶವಿಲ್ಲದಿದ್ದಾಗ, ಕರ್ಮದೇವತೆ ಕಕ್ಷೆಯಲ್ಲಿ ಇರುತ್ತಾನೆ. ಇವನ ತಾಯಿ ಶುಚಿಸ್ಮತಿ. ಪ್ರಹ್ಲಾದನು ಗರ್ಭದಲ್ಲಿರುವಾಗಲೇ ಶುಚಿಸ್ಮತಿ ನಾರದರಿಂದ ಭಾಗವತಾದಿ ಸಚ್ಛಾಸ್ತ್ರಗಳನ್ನು ಕೇಳಿದ್ದಳು. ಆ ಸಂಸ್ಕಾರದಿಂದ ಬಾಲ್ಯದಿಂದಲೇ ಪ್ರಹ್ಲಾದನಲ್ಲಿ ಭಗವದ್ಭಕ್ತಿ ಜಾಗ್ರತವಾಗಿದ್ದಿತು. ಶಂಡ-ಮರ್ಕರ ಬಳಿ ವಿದ್ಯಾಭ್ಯಾಸ, ಹಿರಣ್ಯಕಶಿಪುವಿಗೆ ಪ್ರಲ್ಹಾದನು ಧರ್ಮವನ್ನು ಹೇಳಿದುದರಿಂದ ಕುಪಿತನಾಗಿ ಅನೇಕ ಶಿಕ್ಷೆಗಳು ಭಗವಂತನೇ ಎಲ್ಲ ಆಪತ್ತುಗಳನ್ನು ಪರಿಹರಿಸಿದ. ಪ್ರಹ್ಲಾದನು ದೈತ್ಯಬಾಲಕರಿಗೆಲ್ಲ ವರ್ಣಾಶ್ರಮಧರ್ಮ, ದೇಹದ ಅಸ್ಥಿರತೆ, ಸಾಧನೆಯ ಆವಶ್ಯಕತೆಗಳನ್ನು ಬೋಧಿಸಿದನು. ದೈತ್ಯಬಾಲಕರ ಪರಿವರ್ತನೆ, ಇದರಿಂದ ಕ್ರುದ್ಧನಾದ ಹಿರಣ್ಯಕಶಿಪು ಪ್ರಹ್ಲಾದನನ್ನು ವಧಿಸಲು ಉದ್ಯುಕ್ತನಾದನು. ಆಗ ವಾಯುದೇವರು ಪಕ್ಷಿರೂಪದಿಂದ ಬಂದು ಹಿರಣ್ಯಕಶಿಪುವಿಗೆ ಬೋಧಿಸಿದರು. ಪ್ರಹ್ಲಾದನಿಗೆ ಭಗವಂತನು ಅನುಗ್ರಹಿಸಿದ ಚರಿತ್ರೆ ವಿಸ್ತಾರವಾದ ನಿರೂಪಣೆ. ಪ್ರಹ್ಲಾದನ ನಂತರ ಅವನಿಗಿಂತ ಅಧಮಳು ಗಂಗಾದೇವಿ. ವರುಣನಿಗಿಂತ ಚಿಕ್ಕವಳಾದರೂ ಭಗವಂತನ ಪಾದದಿಂದ ಉದ್ಭೂತಳಾದುದರಿಂದ ಮಹಿಮೆಯಿಂದ ಅಧಿಕಳು. ಅವಳು ಸೀತಾ, ಅಲಕನಂದಾ, ಚಕ್ಷು, ಭದ್ರಾ ಎಂಬುದಾಗಿ ನಾಲ್ಕು ಭಾಗವಾಗಿ ಹರಿದಿರುವಳು. ಅದರಂತೆಯೇ ಇತರ ದೇವತಾಸ್ತ್ರೀಯರ ಸ್ವರೂಪ, ಅವತಾರಗಳ ನಿರೂಪಣೆ. ಕರ್ಮಾಭಿಮಾನಿ ಪುಷ್ಕರನವರೆಗೆ ಎಲ್ಲ ದೇವತೆಗಳ ನಿರೂಪಣೆಯನ್ನು ಮಾಡಿ ಕೊನೆಯಲ್ಲಿ ಭಗವಂತನನ್ನು ಸೇವಿಸುವ, ಆರಾಧಿಸುವ ಕ್ರಮವನ್ನು ತಿಳಿಸಿದ್ದಾರೆ.

ಪ್ರಾತಃ ಕಾಲ ತುಲಸಿಯನ್ನು ನಮಿಸುವಾಗ ಕೃಷ್ಣನನ್ನು, ಮೃತ್ತಿಕಾಶೌಚದಲ್ಲಿ ಕೇಶವನನ್ನು, ದಂತಧಾವನದಲ್ಲಿ ಚಂದ್ರಾಂತರ್ಗತ ಹರಿಯನ್ನು, ಮುಖಪ್ರಕ್ಷಾಲನೆಯಲ್ಲಿ ಮಾಧವನನ್ನು, ಗೋದೋಹದಲ್ಲಿ ಗೋಪಾಲಕೃಷ್ಣನನ್ನು, ಗೋವನ್ನು ಶುದ್ಧೀಕರಿಸುವಾಗ ಗೋವರ್ಧನನನ್ನು, ಶಿಶುವಿಗೆ ತಾಯಿ ಹಾಲುಣಿಸುವಾಗ ಬಾಲಕೃಷ್ಣನನ್ನು, ಮೊಸರು ಕಡೆಯುವಾಗ ದಧಿವಾಮನನನ್ನು, ಮೃತ್ತಿಕಾಸ್ನಾನಕಾಲದಲ್ಲಿ ವರಾಹನನ್ನು, ಊರ್ಧ್ವಪುಂಡ್ರಧಾರಣೆಯಲ್ಲಿ ಕೇಶವಾದಿ ದ್ವಾದಶರೂಪಗಳನ್ನು, ಮುದ್ರಾಧಾರಣೆಯಲ್ಲಿ ಕ್ರುದ್ಧೋಲ್ಕಾದಿಗಳನ್ನು, ಪ್ರಾಣಾಹುತಿಗಳನ್ನು ತೆಗೆದುಕೊಳ್ಳುವಾಗ ಪಂಚಪ್ರಾಣನನ್ನು, ಶ್ರಾದ್ಧದಲ್ಲಿ ಅಚ್ಯುತಾನಂತಗೋವಿಂದರನ್ನು, ವಸ್ತ್ರಧಾರಣೆಯಲ್ಲಿ ಉಪೇಂದ್ರನನ್ನು, ಯಜ್ಞೋಪವೀತಧಾರಣೆಯಲ್ಲಿ ನಾರಾಯಣವಾಮನರನ್ನು, ಆರತಿಯ ಕಾಲದಲ್ಲಿ ಹಾಗೂ ವೈಶ್ವದೇವ ಯಜ್ಞಾದಿಗಳ ಕಾಲದಲ್ಲಿ ಪರಶುರಾಮನನ್ನು, ತೀರ್ಥಪ್ರಾಶನದಲ್ಲಿ

11

ಕೃಷ್ಣ, ರಾಮ, ವಾಸುದೇವರನ್ನು, ಜಲಪಾನದಲ್ಲಿ ಗಂಗಾಜನಕನನ್ನೂ, ಫಲಗಳನ್ನು ಭಕ್ಷಿಸುವಾಗ ಕೃಷ್ಣನನ್ನು, ತಾಂಬೂಲ ಭಕ್ಷಣೆಯಲ್ಲಿ ಪ್ರದ್ಯುಮ್ನನನ್ನು, ಪುಷ್ಪ, ತುಳಸಿಗಳನ್ನು ತೆಗೆಯುವಾಗ ಕೃಷ್ಣ-ಕಪಿಲರನ್ನು ಭಯಕಾಲದಲ್ಲಿ ನರಸಿಂಹನನ್ನು ಪ್ರಯಾಣದಲ್ಲಿ ಕೃಷ್ಣ- ತ್ರಿವಿಕ್ರಮರನ್ನು ಇತ್ಯಾದಿ ಹೀಗೆ ಅನೇಕ ವಿಧವಾದ ದೈನಂದಿನ ಕರ್ಮಗಳನ್ನು ಮಾಡುವಾಗ ಭಗವದ್ರೂಪಗಳನ್ನು ಸ್ಮರಿಸಿದರೆ ಆ ಎಲ್ಲ ಕರ್ಮಗಳಿಂದ ಪ್ರೀತನಾಗಿ ಭಗವಂತನು ಫಲಗಳನ್ನು ಕೊಡುವನು.

ಇಂತಹ ಅತ್ಯಮೂಲ್ಯವಾದ ಅನೇಕ ವಿಚಾರಗಳನ್ನೊಳಗೊಂಡ ಗರುಡಮಹಾಪುರಾಣದ ಬ್ರಹ್ಮಕಾಂಡವು ಅತ್ಯವಶ್ಯವಾಗಿ ಪಠನೀಯವಾಗಿದೆ.

**ಪದ್ಮನಾಭಾಚಾರ್ಯ ಚಿಟಗುಪ್ಪ M.A.**

# गरुडपुराणान्तर्गतब्रह्मकाण्डस्थाध्यायानुक्रमणिका

## अध्यायः-१

नैमिषारण्ये शौनकसूतसमागमः, मोक्षार्थं तत्त्वनिर्णयविषयकप्रश्नाः, नारायणस्यैवादौ नम्यत्वे कारणम्, मुख्यवायोः भगवत्प्रतीकत्वं, विष्णुप्रतिपादकानामेव श्रैष्ठ्यम्, सात्त्विकपुराणविभागः, गरुडपुराणस्य अंशत्रयनिरूपणम्, राजस-तामसपुराणविभागः, सात्त्विकेष्वपि तारतम्यकथनम्, गरुडपुराणस्य उत्तमत्वं,व्यासस्य ऋषित्वनिराकरणेन देवोत्तमत्वकथनम्, लक्ष्म्याः ईशकोटिप्रविष्टत्वकथनम्, वायोः मुख्यतः भूभारहरणे अङ्गत्वकथनम्, भीष्मद्रोणादीनां अवान्तराङ्गत्वनिरूपणम् ।

## अध्यायः-२

तत्त्वाभिमानिदेवानां सृष्टिप्रश्नः, भगवतो स्वस्य रूपादीनां चाभेदः, जीवपरमात्मनोः बिम्बप्रतिबिम्बभावविवरणम्. जीवचितः स्वरूपोपाधित्वम्, प्रलये सर्वजीवानुदरे प्रवेश्य भगवतः शयनं, त्रिविधानन्त्यम्, विष्णोरेव ब्रह्मशब्दवाच्यत्वम्,, वायुविरिंचौ परस्परमविहायैव संसृतौ वसतः इति कथनम्, ब्रह्म-वायु-सरस्वती-भारती-गरुड-शेष-रुद्राणां तारतम्यकथनम्, वेदाक्षराणि यावन्ति, सार्थवेदपाठवर्णनम्, विष्णुसवोत्तमत्वज्ञानपूर्वकमेव वेदपठनं श्रेष्ठं, वेदेन भगवन्तं स्तुत्वा उद्बोधनप्रकारः ।

## अध्यायः-३

सृष्ट्यर्थं देवस्य इच्छा, मूलरूपं, अवताराश्च प्रत्येकशः पूर्णाः, तत्त्वं विचारयतोः गुरुशिष्यभावः, प्राकृताप्राकृतविभेदेन भगवद्वीर्यकथनं, स्त्रीपुंरूपे भगवतः स्तः न नपुंसकरूपं, स्त्रीप्रतिबिम्बार्थं स्त्रीरूपं, लक्ष्मीः अनन्तानन्तरूपेण भगवन्तं पूजयति, वीर्याधानाधारभूता लक्ष्मीः न ऐन्द्रजालिका किन्तु सत्या, अनादिनित्या च, अविद्ययैव नानारूपदर्शनं, ईशजीवयोः

विरुद्धगुणवत्त्वं, कालदेशयोः परमाणुविचारः, अन्त्याणुत्वचर्चा, कालकोटिविहीनत्वं कालानन्त्यमित्यादि, भगवतः अणोरणीयस्त्वं, महतो महीयस्त्वं, पंचभेदकथनं, त्रिगुणसृष्टिः।

## अध्यायः-४

प्रकृतेः त्रिगुणसृष्टिः, श्रीभूदुर्गारूपैः गुणत्रयाभिमानित्वम्, ब्रह्मणि स्थित्वा सृष्टिः, स्वयं स्थितिः, रुद्रे स्थित्वा संहारः, गुणक्षोभः, गुणवैषम्यकथनम्, दशशतादिरूपेण विभागकथनं, महत्तत्वसृष्टिः।

## अध्यायः-५

अहंकारतत्त्वसृष्टिः, वैकारिकादित्रिविधविभागः, सर्वत्रापि लक्ष्म्या सह भगवान् प्रविश्य क्षोभयामास, इन्द्रिय-तन्मात्रा-भूतानामुत्पत्तिः, तत्तदभिमानिदेवानां च उत्पत्तिः, तेषां नामानि, तारतम्यकथनं, देवानां सृष्टौ कालनिरूपणं (यः यदा जातः, तदनन्तरं कः इति) द्वारपालानां विवरणम्, मनूनां तारतम्यं, बुध-स्वाहा-उषा-पुष्करादीनां तारतम्यनिरूपणं...।

## अध्यायः-६

तत्तद्देवानां स्वोत्पत्त्यङ्गे स्थितिः, तदनन्तरं भगवतः स्तुतिः, लक्ष्मीकृतस्तुतिः, ब्रह्मस्तुतिः-भगवत एव सर्वस्वामित्वकथनम्, वायुस्तुतिः-लोकक्षेमार्थं भगवतोऽवतारः, स्वस्य अच्छिन्नभक्तत्वं, सर्वाऽपि भगवत्पूजा इति कथनम्, वैष्णवस्तोत्रं, अवैष्णवनिन्दा, सरस्वतीस्तुतिः-भगवन्महिमा न केनापि साकल्येन ज्ञायते इति कथनं, भारतीस्तुतिः-संसारासारत्वकथनं, वायुना स्वस्याः भगवन्महिमावबोधनकथनं, हरिवाय्वोः सर्वदा सामरस्यं, अवतारेऽपि वायोः न असामर्थ्यं, शेष-गरुड-रुद्र-वारुणी-सौपर्णी-पार्वतीकृतस्तुतिः।

## अध्यायः-७

तारतम्यानुसारेण देवैः भगवतः स्तुतिः, इन्द्र-काम-आहंकारिक प्राण-शची-रति-दक्ष-बृहस्पति-अनिरुद्ध-स्वायम्भुवमनु-वरुण-नारद-भृगु-अग्नि-प्रसूति-

वसिष्ठ-मरीचि-अत्रि-अङ्गिरस्-पुलस्त्य-पुलह-क्रतु-वैवस्वतमनु-विश्वामित्रकृतस्तुतिः ।

## अध्यायः-८

मित्र-तारा-निर्ऋति-प्रावही-विष्वक्सेन-अश्विनौ-गणपति-कुबेर-अग्निव्यतिरिक्तसप्तवसु-मूलरुद्राद्दते दशरुद्र-मरुद्गण-विश्वेदेवाः-ऋभुगण जयाद्याः-पावक(अग्निपुत्र)-एकादशमनु-सप्तपितरः-च्यवन-उतथ्य-बल्यादयः-गन्धर्वाष्टक-प्रह्लाद-पर्जन्य-श्यामला-रोहिणी-संज्ञा-उषा(विराट्) (अनिरुद्धपत्नी)-स्वाहा-बुध-उषा(नामाभिमानि)-शनि-पुष्कर-आजानज देवैः कृता भगवत्स्तुतिरीतिः ।

## अध्यायः-९

आजानजदेवतानामकथनं, गन्धर्वनाम, ऋषिनाम, पितृ, गन्धर्व, सर्वेषां देवादीनां भगवत्स्तुतिकथनं-तत्फलश्रुतिः ।

## अध्यायः-१०

क्षोभानन्तरं ब्रह्माण्डसृष्टिः, ५० कोटिविस्तीर्णब्रह्माण्डं, तदुपरि ५० कोटिविस्तीर्ण आवरणं, आवरणनिरूपणं, जल-तेज-वायु-आकाश-अहंकार-महत्-गुणत्रय-अव्याकृताकाश-तत्रस्थविरजानदी-तत्स्वरूपकथनं, ब्रह्मणा सह मुक्तियोग्यानां स्नानं, ऋजुयोगिनां स्वरूपं, तेषां द्वात्रिंशत् लक्षणानि अन्येषां न्यूनत्वकथनं, ऋजूनां प्रारब्धं, रुद्रस्य, इन्द्रस्य च, आरब्धक्षयः, ब्रह्माण्डान्तर्गता सृष्टिः वैकृता इति कथनं, जगतः सत्यत्वं, विष्णोरेव सर्वोत्तमत्वं, तज्ज्ञानान्मोक्षः ।

## अध्यायः-११

भगवतः अण्डोदके नृणां सहस्रवर्षपर्यन्तं स्वापः, श्रीः श्रुतिरूपेण स्तौति, द्वे अजे प्रकृती, (जीवाच्छादिका परमाच्छादिका इति) जीवब्रह्मभेदः, भगवतो आयुधद्वैविध्यं-भिन्नाभिन्नत्वरूपेण, स्वप्नसुषुप्तिकीर्तनम्, भयादिकं अज्ञानकार्यं,

ब्रह्मणो न भयादि किं तु विष्णुप्रीत्यर्थं, आलोचने सर्वविषयकत्वं,नाडीप्रवेशः तत्र विष्णोरन्वेषणम् ।

## अध्यायः-१२

कमलनालस्थब्रह्मणः अन्वेषणं, भगवन्महिमायाः दुरधिगमत्वकथनं, ''तप'' शब्दश्रवणं, दिव्यसहस्रवर्षं तपः, भगवतः प्रादुर्भावः स्तुतिश्च, भगवतः अप्राकृतविग्रहवत्त्वं, चतुर्मुखब्रह्मभोग्यं सर्वमपि विष्णुभोग्यमेव, ऋजूनां सुस्पष्टज्ञानं, ऋजूनामनादितः परोक्षज्ञानं पूर्णं, ब्रह्मणस्त्वंशरूपेषु भारत्याः......इच्छाव्यक्तिः प्रायशो मारुतस्य इत्यादि, विष्णोः मूलरूपेषु अवतारेषु च छेद-भेद-मोह-क्लेशाद्यभावः, विष्णोरितरदेवैः अभेदचिन्तनं अनर्थप्रदं, कलिभिन्नदैत्यानां शतवर्षानन्तरं कलिना सहैव वायोर्गदाप्रहारेण तमसि प्रवेशः, दुर्योधन-अलक्ष्मी-जरासन्ध-हिरण्याक्ष-हिरण्यकशिपु-मणिमान्-बक-बाण-शम्बर-हिडिम्ब-कीचक-द्वापर-धेनुक-केशी-त्रिरिक-पौरुक-कंस-कुम्भकर्ण-इन्द्रियाभिमानिदैत्यानां-स्वरूपतारतम्यकथनं, रुद्रादयः भगवदिच्छया कदाचित् विरुद्धतत्त्वं प्रतिपादयन्ति, वायोस्तु कदापि नेति अच्छिन्नभक्तत्वकथनं, तथापि मयि अनुगृहाणेति चतुर्मुखस्य प्रार्थनम् ।

## अध्यायः-१३

चतुर्मुखस्तोत्रेण प्रीतः नारायणः देवतासृष्ट्यर्थं ब्रह्माणमादिदेश, सृष्ट्या भगवतः न किमपि प्रयोजनं, वायु-भारती-शेष-रुद्र-गरुड-सौपर्ण्यादि इन्द्रियमानिदेवानां-तत्त्वाभिमानिदेवानां-पुष्करपर्यन्तं सर्वदेवानां तत्तत्काले संवत्सरे (यस्य यदा, यदनन्तरं यस्य इत्यादि) काल-योग्यता-तारतम्यपूर्वकं सृष्टिप्रकारविवरणम् ।

## अध्यायः-१४

विष्णोः अवताराणां, भगवदवयवानां च प्रत्येकशः अनन्तत्वं (नख, पाद, केश, रोम, स्कन्ध, बाहु, इत्यादि) सर्वपदार्थस्य सारभोक्तृत्वं विष्णोः,

फलानां, पुष्पाणां, तैलादीनां, सारभोक्तृत्वं विष्णोः, वैश्वदेवविहीनान्नस्य निन्द्यत्वं, विविधफल, अन्नादीनां पुष्पाणां च कालभेदेन सारासारत्वनिरूपणं, मासभेदेन केषांचित्पदार्थानां असारत्वकथनं, मल्लिकादिपुष्पाणां शाकानां, पत्रशाकानां च सारासारत्वकथनं, एकादश्यादिषु विहिताविहितकथनं च ।

## अध्यायः-१५

भगवदवताराणां कीर्तनं-वासुदेव,संकर्षण, प्रद्युम्नानिरुद्धरूपाणि, षोडशकलाः (ज्ञान,कर्म-इन्द्रिय, भूतपंचकं, मनश्च), सनत्कुमार, वराह, महिदास, नारायण, कपिल, दत्त, यज्ञ, ऋषभ, कूर्म, धन्वन्तरि, मोहिनी, नृसिंह, वामन, परशुराम, वेदव्यास(चतुर्वारं), राम, वेदव्यास(२८ महायुगे), कृष्ण, बुद्ध, कल्कि । केशवादि, सङ्कर्षणादि, विश्वादिसहस्र, परादिरूपेषु अत्यन्तमभेदः नाणुमात्रं भेदश्चिन्तनीयः ।

## अध्यायः-१६

लक्ष्म्याः नानारूपाणि, अवताराश्च, जया, माया, कृति, शान्ति, दुर्गा, भू, अन्नपूर्णा, दक्षिणा, जयन्ती, जानकी, रुक्मिणी, सत्यभामादिकाः, विरिंचस्य- विरिंच, महान्, विधि, चतुर्मुखरूपेण चत्वारोऽवताराः वायोः- प्रधान, सूत्र, धृति, स्मृति, (श्वेतद्वीपस्वामिनः स्मृतेः)मुक्ति, चित्त, बल, यष्टृ इत्यादिरूपाणि, अनादिकालादारभ्य वक्रताभावात् ऋजुत्वं, वक्रत्वं नाम काम्यकर्मकरणं, कदाचिद्रुद्रादीनां तदस्ति, शिलादय एव विष्णुरिति ज्ञानं विपरीतं, प्रज्ञा, ज्ञानं, महाध्याता, विज्ञ (विज्ञान), विराग, सुखेत्यादि वायो रूपाणि, देवानां निरयो नास्ति, असुरावेशादेव दुःखादिकं, मनुष्य-ऋष्यादीनां च कलिबलादेव पापकर्मादि, वायोः अवतारत्रयं-द्वितीयरोचनाख्यः इन्द्रः, रामावतारे-हनूमान्, कृष्णावतारे-भीमः, कलौ मणिमान् संकररूपेण वेदादिशास्त्रदूषकः भवति तदा पूर्णप्रज्ञरूपेण अवतीर्य भगवन्मतस्थापनं करोति(मध्वावतारः), गर्भवासादिदुःखाभावः, शुक्लशोणितसम्बन्धाभावः,

अवतारकाले पूर्वं गर्भं समाशोध्य तत्र प्रवेशः, सर्वेष्वप्यवतारेषु ज्ञानानन्दादयः पूर्णाः (२३ रूपाणि) । वाण्याः अवतारत्रयं-ब्रह्माणी, सावित्री, सरस्वती । भारत्याः अवताराः-सर्ववेदात्मिका, भुजि, श्रद्धा (रोचनेन्द्रभार्या), हनूमदवतारे शिवकन्या, दमयन्ती, इन्द्रसेना, नमनन्दिनी, काली, द्रौपदी, (शच्यादियुता), मध्वावतारे कालटीग्रामे संकरगृहे कन्या भविष्यति- कन्यारूपेणैव वासः ।

**अध्यायः-१७**

द्रौपदीनिर्णयः, वायोः धर्मजादिषु वीरादिरूपेण आवेशः । सुराणां भोगः मानुषभोगविलक्षणः ।

**अध्यायः-१८**

पुरुषाख्यविरिंचानन्तरं शेषोत्पत्तिः, भगवच्छय्यात्वं, गायत्री भारतीभ्यां शतगुणावरत्वं, लक्ष्मण, शुक्लकेशावेशेन बलराम इति अवतारद्वयम् । गरुडस्य नावतारः, रुद्रस्यावताराः-सदाशिवः-दशकल्पं लवणाम्भसि तपः, शुकः-दूर्वासाः-द्रौणि-वामदेव-अघोर-सद्योजात-और्वरुद्रकृतस्तुतिः, नैवेद्यशेषभोगस्य महिमा ।

**अध्यायः-१९**

विरिंच-वायु-वाणी-भारतीनां तारतम्यानुगुणं भक्तिज्ञानबलादयः, भगवतः निरतिशयज्ञानबलादिकं, तदनन्तरं लक्ष्म्याः, भगवद्विषये न सर्वविषयकत्वं, चतुर्मुखादपि वाण्याः अल्पं, ततोऽल्पं शेषादीनां तमोगुण-अहंकार, बुद्धितत्त्व, भूततत्त्वादिषु यथायोग्यं ततोऽधमाः देवाः हरिं पश्यन्ति, केचिद्धृदये इत्यादिकथनं, नीला हव्यवाहपुत्री कृष्णमेव पतिं कामयाना । तस्याश्चरितं, कलौ युगे दुर्लभानां पदार्थानां कीर्तनं-शालग्राम-गो-अतिथि-तीर्थ-क्षेत्रादि....अतः कृष्ण एव पतिर्भूयात् इति तस्या इच्छा, दिव्यसहस्रवर्षं तपः, नारायणस्य प्रत्यक्षत्वं, भगवतः सङ्ग एव मुक्तिप्रदः अन्यत्सर्वं त्याज्यं, भगवानेव पतिर्भूयात् इति प्रार्थना, कृष्मजन्मनि संस्कारात्पूर्वं भार्याऽभवत्,

तदर्थं तां तनुं विसृज्यं अन्यजन्मनि कुम्भकगृहे जन्म, श्रीकृष्णेन साकं विवाहश्च ।

## अध्यायः-२०

भद्रा-मित्रविन्दयोः विवाहः । भद्रायाः पिता नलः गात्रपीडां कुर्वन्तीं ता दृष्ट्वा किमर्थमेतदिति पृष्टे भगवदर्थमेव सर्वं अङ्गादिकं विनियोक्तव्यं अन्यथा यमलोकार्थं प्रयोजनमिति सुदीर्घं जिह्वा, हस्त, पाद, वदन, शिरः, कर्णानासिकादीनां सार्थक्यकथनं, तदनन्तरं तां तनुं विसृज्य देहान्तरे भद्रारूपेण जन्म तत्र श्रीकृष्णेन सह उद्वाहः ।

मित्रविन्दायाः पूर्वजन्मवृत्तान्तः-भगवत्प्राप्तौ साधनं श्रवणं-तस्य विस्तरशः महिमा, भागवत, विष्णुगरुडपुराणानां अवश्यं श्रोतव्यत्वं, कर्णयोः हरिकथालाप एव भूषणं, धनार्जनादौ व्यर्थं न कालो यापनीयः, कर्मानुसारेण सर्वं भगवानेव ददाति इत्याद्युक्तिः, तद्देहत्यागः, अन्यजन्मनि वसुदेवभगिन्यां मित्रविन्दानाम्ना जनिः, स्वयंवरे श्रीकृष्णेन सह विवाहश्च ।

## अध्यायः-२१

कालिन्दीविवाहः-सूर्यपुत्री यमुनानुजा कालिन्दी कृष्णपत्नीत्वकामेन तपश्चकार. तदा श्रवणं न भगवन्महिमाश्रवणे सक्तं, नेत्र, घ्राण, त्वक्, पादादिकं न हरिसेवायां आसक्तं, विष्ण्वर्पितवस्तुजातं संसारे कदापि न स्वीकृतं, मित्रपुत्रकलत्रादयः केवलं संसारसुखभोगायैव कारणीभूताः न भगवन्महिमावबोधाय इति तेषा त्याज्यत्वं, एवं विचार्य तपसि क्रियमाणे कृष्णस्तामुवाह । तया न कोऽपि लाभः कृष्णस्याप्तकामत्वात्, ब्रह्मरुद्रशिवादिकाः तस्मादवराः इति विवरणम् ॥

## अध्यायः-२२

लक्षणाविवाहः- सुलक्षणैः संयुता भगवानेव पतिः स्यात् इति तपश्चकार, द्वात्रिंशल्लक्षणानां सुदीर्घं वर्णनं, प्रत्येकशः तेषां कीर्तनं, विष्णु-रमा-

ब्रह्मभारतीनां द्वात्रिंशल्लक्षणवत्त्वं-तदन्येषां रुद्रादीनां अष्टाविंशदारभ्य ऊनलक्षणवत्त्वकथनं चक्रवर्तिपर्यन्तं क्रमादूनलक्षणनिरूपणं।

द्वात्रिंशद्दोषाणां सुदीर्घं निरूपणं, प्रत्येकशः तेषां कीर्तनं, कलेः समग्रदुर्लक्षणयुतत्वकथनम्, रुद्रादीन् आरभ्य यस्य यस्य यद्यद् दुर्लक्षणं तस्य तस्य कीर्तनम्।

पितृगृहे वर्तमाना लक्षणा पितृदत्तं सर्वं भगवति निवेद्य स्वीकरोति स्म, पुत्र, मित्र, शालक, गो, अश्व, गजब्राह्मणादिषु स्थितस्य भगवतः रूपवर्णनं (नामनिर्देशः) तं देहं विसृज्य अन्यजन्मनि मद्रपुत्रीत्वेन जनिः, स्वयंवरे तस्याः कृष्णेन सह परिणयः।

## अध्यायः-२३

जाम्बवतीविवाहः-पूर्वजन्मनि सोमपुत्री बभूव, इतरापेक्षया तस्याः श्रैष्ठ्यं, लक्ष्म्याः विशेषसन्निधिः, पितुर्गृहे वर्धमाना सा भागवतादिपुराणश्रवणं, सदा भक्तिपुरःसरं प्रातरारभ्य रात्रिप्रभृति विष्णुपूजनं, ऊर्ध्वरेताः- भूत्वा तीर्थयात्रां चकार । तीर्थयात्रामहत्त्ववर्णनं, निष्कामतयैव कर्तव्यं, वाहन, पादत्राणादिसहितयात्रा न समग्रफलप्रदा, तीर्थयात्रायां परान्ननिषेधः, यात्रायां दिवारात्रौ सर्वदा हरिमाहात्म्यश्रवणं विधेयं, पुण्यक्षेत्रदर्शनात्पापनाशः, श्रीनिवासस्य दर्शनं कदा भवेत् इति सोत्कण्ठं स्तुतिः, शेषाचले श्रीनिवासस्य दर्शनं, शेषाचले एकैकं सोपानमारुह्य पुरतः शालग्रामं निधाय नमस्करणं, मध्ये भागवतादिसच्छास्त्रश्रवणम्।

## अध्यायः-२४

वेंकटाचलस्य महिमावर्णनम्- जैगीषव्येन वर्णनं, सोपानारोहणवैशिष्ट्यं, सोमपुत्री जैगीषव्यं प्रति पुनः तन्महिमानं पप्रच्छ, जैगीषव्यः भगवदपरोक्षप्रकारमाह, अनन्तसूर्याधिककान्तिमत्त्वेन ब्रह्मणः रुद्रादीनां लक्षाधिकत्वेन इन्द्रादीनां सहस्राधिकत्वेन, मानुषाणां विद्युद्वत्, ऋषीणां

चन्द्रवत् इत्यादि। नवविधद्वेषनिरूपणं, भक्तानां कीर्तनं, प्रह्लाद,नारद,अम्बरीष, मुचुकुन्दादयः लक्ष्मीवायुसरस्वत्यः अच्छिन्नभक्ताः रुद्रादयः देवा विश्वामित्रादयः मान्धातृप्रभृतयः, भागीरथ्यादयश्च, विष्णु, ब्राह्मण, गंगा, तुलस्यादीनां नमनप्रकारः, ब्रह्मादिनामानि तत्तद्देवानां विष्णुः ददौ, श्रीनिवासशब्दार्थविवरणं, केशव, नारायणगोविन्दशब्दनिर्वचनक्रमः, जैगीषव्याय सोमपुत्री श्रीनिवासस्य सविधे विद्यमानतीर्थाणि अवलम्ब्य पप्रच्छ, विस्तरेण जैगिषव्यस्तेषां तीर्थाणां नामानि, महत्त्वं च प्रत्यपादयत्, विस्तारेण पीठदेवतास्थानं, नामसंकीर्तनं च, आवरणदेवतानामादिकं स्थानकीर्तनं च, एवमुक्ता सोमपुत्री श्रीनिवासं द्रष्टुं जगाम।

## अध्यायः-२५

स्वामिपुष्करिणीमहत्त्वं, तत्र स्नात्वा श्रीनिवासं सोमपुत्री अन्याः कन्याश्च ददृशुः, श्रीनिवासरूपवर्णनं, तासां स्तुतिश्च, द्रव्यपुत्रमित्रकलत्रादिषु क्रियमाणं कामादिकं निराकृत्य त्वय्येव मनः देहि इति प्रार्थना, प्रसन्नः श्रीनिवासः सबीजाक्षरमन्त्रं ददौ, ततः सा तं जप्त्वा स्वामिसरसि ब्राह्मणान् भोजयामास, स्वां कृतकृत्यां मेने, देवैः पुष्पवृष्टिः, मन्त्रार्थं, महिमां च जैगीषव्य उवाच ॐ नमो वेंकटेशाय ॐ वेंकटश-व्यंकटेशशब्दस्य च विस्तारेण निर्वचनं, रात्रौ निद्रानन्तरं प्रातः उत्थाय सुप्रभातस्तोत्रकरणं नदी-देवता-ऋषि-राज-वन-वृक्ष-सिन्धु-पुष्प इत्यादयः सर्वे कुर्वन्तु सर्वे मम सुप्रभातम्। ततः व्यङ्कटेशं स्मृत्वा पुष्करिण्यां स्नानार्थं जैगीषव्येण सह गमनम्।

## अध्यायः-२६

सोमपुत्री-श्रीनिवासः कुतः आगतः, शेषाचलस्य आगमनं, स्वामिपुष्करिणीविषये पप्रच्छ। जैगीषव्य उवाच-सनकादिभिः शप्तौ जयविजयौ हिरण्याक्षहिरण्यकशिपुरूपेण जातौ. अष्टवर्षः हिरण्याक्षः तपस्तप्तुं इयेष माता रुरोध, तदा देवावेशात् मात्रे तत्त्वमुपदिदेश, पुनः असुरावेशात् तपस्तप्त्वा

ब्रह्माण्डं जले स्थापयामास, वराहः तं हत्वा भुवं उद्धार, तदा शेषाचलस्थापनवर्णनं शेषाचलस्य माहात्म्यवर्णनं,(तस्य नानानामवत्त्वं तस्य सार्थक्यं च) स्वामिपुष्करिणीमध्ये श्रीनिवासः सन्निहितः, सार्धत्रिकोटितीर्थसन्निधानं तत्रास्ति, स्नानमात्रेण पापविमुक्तिः सद्गतिश्च, स्वामिपुष्करिणीपरितः नानाविधतीर्थजातं तेषां नामानि, परिमाणं, स्नानात्फलप्राप्तिः इत्यादीनां वर्णनं, (वायुतीर्थ-मध्वतीर्थ-चन्द्रतीर्थ-रौद्रतीर्थ-ब्रह्मतीर्थ-वह्नितीर्थ-नैर्ऋततीर्थ-वरुणतीर्थ-इत्यादि) तत्र स्नानं, भागवतश्रवणे च कृते महाफलं, वस्त्र,द्रव्य,शालग्राम,गोदानादिभिः महत्पुण्यं, शालग्रामलक्षणानि, तत्र तीर्थे दानान्महापुण्यावाप्तिरिति कथनम् । जनार्दनशालिग्रामलक्षणं, दधिवामनशालग्रामलक्षणं, भूवराहशालग्रामलक्षणं, नृसिंहशालग्रामलक्षणं, लक्ष्मीनारायणशालग्रामलक्षणं, सीताराम-शालग्रामलक्षणं, वासुदेवशालग्रामलक्षणं, पट्टाभिरामशालग्रामलक्षणं, पुरुषोत्तमशालग्रामलक्षणं, अनन्तपद्मनाभशालग्रामलक्षणं, विश्वम्भर-शालग्रामलक्षणं, मत्स्यशालग्रामलक्षणं, शिंशुमारशालग्रामलक्षणं, त्रिविक्रमशालग्रामलक्षणं, एवं जैगीषव्येण पुष्करिणीमहिमावर्णनम् ।।

**अध्यायः-२७**

पापविनाशिनीतीर्थमहिमा-सोमपुत्री जैगीषव्यविप्रं तीर्थमहिमाप्रश्नं पप्रच्छ तदा जैगीषव्यः- ब्रह्महत्यादिपापनिवारणं अस्यां स्नानेन भवति, ब्रह्महत्या, सुरापान, स्वणस्तेयादिपापनाशः, तत्र स्नात्वा पुनः कुमारीतीर्थं प्राप, तस्य महिमावर्णनं, तत्र च स्नात्वा भक्त्या वेंकटेशस्य अंगप्रदक्षिणं चक्रे । ततः परदिने तुम्बुरुतीर्थं प्राप, तस्य महिमा, तुम्बुरुणा साकं नारदः अत्र तपश्चक्रे, विष्णोः प्रादुर्भावः, ततः कपिलतीर्थं, पञ्चायुधतीर्थं, ब्रह्मतीर्थं, ऋषितीर्थं इत्यादिषु सस्नौ । तदनन्तरं तां तनुं त्यक्त्वा जाम्बवतः पुत्री बभूव । इत्थं वेंकटगिरिमहिमावर्णनम् । अत्र नैवेद्यस्वीकारविचारः, स्वस्य प्राशस्त्याभावे गुडादिग्रहणम् ।

## अध्यायः-२८

पार्वत्या अवतारः, वारुण्यां लक्ष्मीसन्निधानं, अतः शुक्लकेशावेशयुतस्य बलभद्रस्य पत्नीत्वं, (रेवती) सौपर्णी एतास्तिस्रः षम्महिषीभ्यः द्विगुणाधमाः रुद्रादिभ्यः दशगुणाधमाः, कुत्रचित् जाम्बवत्याः श्रैष्ठ्यं, कुत्रचन शेषादवरत्वं तस्य सन्देहस्य परिहारः, चतुर्दशसु इन्द्रेषु सप्तमस्य पुरन्दरस्य नामनिर्वचनं, षष्ठस्य मन्त्रद्युम्नस्य निर्वचनं उभावप्येकः, गाधि,विकुक्षिशब्दार्थविवरणं, कुशशब्दार्थः, मन्त्रद्युम्न, पुरन्दर, गाधि, वालि, अर्जुन, विकुक्षि,कुशाः एते समाः, कृष्णपुत्रः प्रद्युम्नः भरतः अभवत्, भरतशब्दनिर्वचनं, चक्राभिमानी कामः-साम्बः, सुदर्शन-भरत-प्रद्युम्न-साम्ब-सनत्कुमारस्कन्दाः समानाः, इन्द्रकामौ उमादिभ्यो दशगुणावरौ तयोरपि कामः इन्द्राधमः, आहंकारिकप्राणः कामेन्द्राभ्यां दशगुणाधमः, अनिरुद्धः-शत्रुघ्नः, प्रद्युम्नपुत्रः-अनिरुद्धः(सङ्कर्षणाविष्टः) रतिः-रुग्मवती, लक्षणा(दुर्योधनपुत्री) द्विरूपा, बृहस्पतिः -तारः (वानरः), द्रोणः, उद्धवः त्रयोऽवताराः शची-तारा(वालिपत्नी), चित्राङ्गदा, इति द्विरूपा, मन्त्रद्युम्नभार्या-पुलोमजा, गाधिभार्या, कौशिका, विकुक्षिभार्या, वसुमती, कुशभार्या, कान्तिमती एताः शच्याः अवराः

शची-रति-अनिरुद्ध-मनु-दक्ष-बृहस्पति एते अहंकारात् दशाधमाः, प्रवहवायुः-कोणाधिपः-नासिक्यः-अतिवाहिकः एकः एव दक्षादिभ्यः पंचगुणाधमः। प्रवहशब्दस्य सार्थक्यं, जीवः परमात्मा च सत्यः भेदश्च सत्यः पंचभेदः, श्रोत्र,नेत्र,शिश्न,रसना, इत्यादीनां इन्द्रियाणां दुष्टवस्तुषु संगनिरूपणं, बुद्धिद्वयं (दुष्टा-सुष्ठु इति)बुद्धिद्वयस्य व्यापारनिरूपणं, (ज्येष्ठादेवीपूजाकरणं) क्षुद्रदेवाराधनं कुर्विति दुष्टबुद्ध्या प्रेर्यते जीवः । तन्निन्दा सुष्ठु बुद्ध्या विष्णुरेवोपास्य इति उच्यते । (अत्र ज्येष्टादेवी-शेष-विनायकादीनां पूजा निन्दिता वर्तते तत्कथं योजनीयं इति विचारणीयम्।)

अत्रेदं अवधेयम्-रामतत्त्वप्रकाशनपुस्तके ३९तमेन श्लोकेन २९ तमः अध्यायः समाप्तः तदनन्तरं अग्रिमश्लोकेन ३० तमः अध्यायः प्रारब्धः। ३० तमे अध्याये ११७ श्लोकाः विद्यन्ते।

## अध्यायः-३१

ब्रह्मणः पुत्रः सूर्यपुत्रो यमो जातः, तस्यैव सत्यजिदिति नामान्तरं, सत्यजिदवतारे विष्णुमुद्दिश्य दिव्यसहस्रवर्षपर्यन्तं तपःकरणं, तत्तपोविघाताय कलिभार्या दुर्बुद्धिरागता, तया भगवतः निर्माल्यस्रग् धूपनैवेद्यादीनां एकादशी मुद्राधारणादीनांनिन्दनेन तद्बहुत्यागः, तपसा तुष्टानां रुद्रेन्द्रवायूनामागमनं, सत्यजित् विष्णुरेव कर्ता जीवस्तु फलभोक्ता अतः सर्वत्र क्षमैव परमो धर्मः इति प्रत्यपीपदत्, तदा वायुना विष्णोरेव कर्तृत्वं तथाऽपि जीवस्यापि पराधीनकर्तृत्वं अंगीकार्यम्, तेनैव विधिनिषेधशास्त्रसार्थक्यं, अज्ञो दैवमित्येव मत्वा सर्वं परित्यजति इत्यादि समर्थनं, तदा प्रसन्नो विष्णुः सत्यजितं अनुगृह्य इन्द्रपदं ददौ। यमस्यावताराः सत्यजित्-जाम्बवान्-विदुरः युधिष्ठिर- इति चत्वारः। सूर्यः-रामावतारे सुग्रीवात्मना, कृष्णावतारे कर्णात्मना बभूव, वरुणस्य मण्डूक,वसुषेण, महाभिषक् शन्तनुरूपेण, चत्वारोऽवताराः मण्डूकरूपिणा वरुणेन विश्व-तैजस-प्राज्ञ-तुरीयात्मना-चतुर्धावस्थितस्य भगवतो वर्णनम्-तदेव माण्डूकोपनिषन्नाम्ना प्रसिद्धं, मण्डूकसुषेणादिशब्दानां अर्थनिर्वचनं अवतारकारणनिरूपणं च।

## अध्यायः-३२

चतुर्मुखब्रह्मणो नारदजन्म नारदशब्दनिर्वचनं, नारदेन नरके पापच्यमानानां नानाविधपापिनां दर्शनं, एकादश्यादिभोजनादिना दुःखादिकं, शालिग्रामादीनां अपूजनेन, महामन्त्रादीनां जपाभावेन दुःखभोजिनां दर्शनं, भगवन्नाम्नो महापातकनाशनशक्तत्वेऽपि तस्यापठनेन लभ्यमानदुर्गतिवर्णनं, हरिनामस्मरणप्रकारबोधनं, अवैष्णवत्वेऽपि साध्वीकन्याग्रहणं, कदाप्यवैष्णवाय

वैष्णवकन्याप्रदानं न कार्यम्, कन्याविक्रयदोषकथनं, सप्तविक्रयिणां चण्डालत्वं, मोक्षार्थं हरिनामैव तारकमिति वर्णनम् ।

## अध्यायः-३३

वह्निस्वरूपकथनं, तस्यावतारत्रयं-रामावतारे नीलनाम्ना वानररूपं, रामपुत्रत्वेन लवनाम्ना जन्म । कृष्णावतारे धृष्टद्युम्नात्मना अवतारः । भृगुः पादप्रहारदोषेण व्याधो बभूव, भृगुशब्दार्थवर्णनं, विष्णुसर्वोत्तमत्वे विवादे सति भृगुणा रुद्र-ब्रह्म-विष्णुसमीपगमनं, क्रोधेन शापाय प्रवृत्तः पार्वत्या वारितश्च, भृगुमागतं अजानन्निव अजः स्थितः, भृगुः क्रोधाद्धन्तुं ययौ तदा ब्रह्मा क्रोधं शमयामास ।। ततः विष्णुं दृष्ट्वा भृगुः पादतलेन तताड । तदा विष्णुः निर्विकारः सन् ब्राह्मणानां माहात्म्यं लक्ष्म्यै सविस्तरं न्यरूरुपत्, क्षमायाचनेन लज्जितो भृगुः निवृत्तः सभायां विष्णोः सर्वोत्तमत्वं प्रत्यपादयत्, ब्रह्मशिवयोः क्रमादवरत्वं प्राख्यापयत् । कृष्णावतारे कृष्णपुत्रसाम्बस्य गर्भिणीवेषधारणेन वंचनसमये विप्रशापप्रभावेन मुसलेन यादवमरणं, तदा जराव्याधः श्रीकृष्णं मुसलस्थायसेन ताडयामास, पश्चाद्भक्त्या प्रायश्चित्तेन पूतश्च ।

## अध्यायः-३४

विश्वामित्र-वसिष्ठ-मरीचिमुनीनां जन्म, तच्छब्दनिर्वचनं च, अत्रेः ब्रह्मणो नेत्राज्जन्म, जन्मानन्तरमेव अत्रिणा भगवदाराधनं वाय्वादीनां परीक्षार्थं आगमनं, तदा अत्रिः विष्णुरेव मम रक्षकः, वामन-व्यास-धन्वन्तरि-नृसिंह-भार्गवादिरूपेण तत्तद्देशे काले च सर्वान् रक्षति इति कथयति ।

त्र्यम्बको वृको भूत्वा अत्रिमत्तुं आजगाम तदा वायुः श्वानरूपं धृत्वा ररक्ष । शेषः सर्पः सन् भीषयामास तदा सरोजयोनिः गरुडरूपं स्वीकृत्य पक्षवातेन विशीर्णितवान् । आनन्दनामकहरिणा त्रातत्वात् तस्य अत्रिरिति नामसार्थक्यं । अंगिर-पुलह-पुलस्त्य-क्रतुप्रभृतीनां चतुर्मुखाज्जन्म, तत्तच्चब्दनिर्वचनं, तेषां तारतम्यनिरूपणं च ।

## अध्यायः-३५

द्वादशादित्येष्वेको मित्रः कश्यपपुत्रः कृष्णावतारे राह्वंशयुक्तः भीष्मको नाम राजा बभूव, मित्रपुत्री गुरुभार्या तारा द्रोणभार्या कृपिसंज्ञा बभूव, स्वपातिव्रत्यात् चन्द्रसंगाद्दोषयुक्ताऽपि पंचकन्यासु स्मरणयोग्या । प्रवहपुत्रो निर्ऋतिः रामावतारे दुर्मुखो नाम वानरः, कृष्णावतारे घटोत्कच इति च जातः भानुपुत्री प्रवहभार्या प्रावही वैष्णवस्त्रीधर्मान् बोधयामास । रेणुका-शूद्रादिस्थापितवायुप्रतिमा इत्यादीनां पूजनं नैव कार्य, सर्वोत्तमाख्य गलसूत्रं, कथाख्याभरणं, लक्ष्म्याख्यकेशं, गायत्र्याख्यहरिद्रां, गरुडाख्यधूपं, पार्वत्याख्यमालां, सौपर्ण्याख्यसुवर्णं, वारुण्याख्यगन्धं धार्यम् । लौकिकधूपादीनां अग्राह्यत्ववर्णनं च । तारतम्यज्ञानविधुराणां स्त्रीणां निन्दनं निर्ऋति-मित्र-तारा-प्रावहीनां साम्यं इतरदेवतातारतम्यकथनं च ।

## अध्यायः-३६

वायुपुत्रः विष्वक्सेनः नारायणस्य पार्षदः स्वपतिविनायकतुल्यः, अश्विनौ, गणपतिः, वित्तपश्च मित्रादिभ्योऽधमाः, शतसंख्याकदेवानामुल्लेखः, वस्वष्टकं, रुद्रैकादशकं, अजैकपाद-भूरिः, अहिर्बुध्नः-भूरिश्रवाः, विरूपाक्षोऽश्वत्थः (कृष्णभक्तः) विष्कम्भः-कृपः, पत्रतापाख्यः-सोमदत्तः, स एव जरासन्धसुतः (सहदेवः) मूलरुद्रः-भवः । द्वादशादित्याः । सविता सत्यवत्यां कृष्णाज्जातः नाम्ना भानुः, त्वष्टा वीरसेनः (यमाविष्टः) दशप्राणाः । परावहः-पाण्डुः, सौम्यः- विपृथुः, अपानः-गवाक्षः,व्यान-गवयः, उदानः-वृषः,समानः - गन्धमादः सवत्रात इति च । कूर्मः-कुन्तिभोजः । दश विश्वेदेवाः । तन्नामानि तेषां कार्यं च । पाण्डवपुत्रतया जन्म, अश्विनौ रामावतारे मैन्दविविदौ, कृष्णावतारे नकुलसहदेवौ, ।शतस्थदेवविषये गरुडप्रश्नः, श्रीकृष्णसमाधानं च। तारतम्यज्ञानस्य दौर्लभ्यकथनं, वेदादिज्ञानवतोऽपि तारतम्यज्ञाने निष्फलत्व, शतस्थदेवतारतम्यकथनम् ।

## अध्यायः-३७

जयविजयादयोऽष्टौ द्वारपाः, तन्नामानि, तत्त्वाभिमानिदेवावरत्वं, मातृगर्भस्थजीवानां दुःखित्वकथनं, तत्रापि ऋषिदेवतामानवभेदात् दुःखनिरूपणं, दैत्यानां गर्भवासदुःखवर्णनं, देवादिजीवस्य गर्भे भगवत्स्तुतिप्रकारवर्णनम्, संसारस्य असारत्वकथनम् ।

## अध्यायः-३८

भृगुपुत्रः-च्यवनः, बृहस्पतिपुत्रः-उचथ्यः तयोर्नामसार्थक्यं, चतुर्दशमनूनां नामानि तन्निर्वचनं च, सप्त पितरः कर्मदेवाः गन्धर्वाष्टकं च जयादिभ्योऽधमाः । प्रह्लादः कर्मदेवसमः । विस्तरेण प्रह्लादचरितं प्रह्लादजनन्याः शुचिष्मतीति नाम, गर्भिणी सा नारदं संपूज्य भागवतमहिमानं अपृच्छत्,नारदेन भगवतः पारम्यं, भगवति सर्वेन्द्रियाणां प्रावण्यं, विष्णुभक्तेरेव साधनोत्तमत्वख्यापनं, भगवन्नामकीर्तनश्रैष्ठ्यकथनं । शुचिष्मत्यां प्रह्लादावतारः, शैशवादेव तस्य विष्णुभक्तत्वं, प्रह्लादभक्तिं दृष्ट्वा हिरण्यकशिपुसन्तापः, पितरं प्रह्लादः सूक्तिभिः बोधयामास । नवविधभक्तिनिरूपणं, विष्णोराराधनक्रमः, शुक्रपुत्रशण्डामर्कटाभ्यां हिरण्यकशिपुसान्त्वनम् ।

## अध्यायः-३९

प्रह्लादवाचा क्रुद्धः पिता गज, सर्प, विषपान, समुद्रक्षेपण, पर्वतादधःप्रक्षेपणादि आज्ञापयामास, भगवद्भक्ते तत्सर्वं निष्फलं जातं शण्डामर्कवाचा त्रैविध्याध्यापनं, दैत्यकुमारकेभ्यः प्रह्लादोपदेशः, मनुष्यजन्मसाफल्यं, पञ्चरात्रोक्तरीत्या पञ्चकालेषु भगवत्पूजनं, भगवद्ध्यानप्रकारनिरूपणं, तच्छ्रुत्वा हिरण्यकशिपुक्रोधः, प्रह्लादेन भगवद्बलादिकं निरूप्य समाधानं, क्रुद्धेन पित्रा खड्गं प्रगृह्य प्रह्लादवधोद्योगः तदा वायुः पक्षिरूपेण आगत्य हिरण्यं भगवन्माहात्म्यं प्रोच्य इतरदेवानां अस्वातन्त्र्यं, असामर्थ्यं प्रकटयामास । प्रह्लादं प्रीणयस्वेत्युक्त्या वायुः प्रययौ ।

## अध्याय-४०

कुपितो हिरण्यः द्विजगोऽग्निप्रतीकानि संच्छिद्य तुलसी-अश्वत्थ-शालिग्रामामादीन् चूर्णयामास । तदा हरिः स्तम्भे भृत्यसंरक्षणाय नृहरिरूपेण प्रकटः, नृसिंहरूपस्य अद्भुतत्ववर्णनं, हिरण्येन सह युद्धविहारः, हिरण्यवधः, देवैः कृता पुष्पवृष्टिः, ब्रह्म-रुद्र-ऋषि-पितृ-सिद्ध-विद्याधर-नाग-प्रजापति- मनु-गन्धर्व-चारण-यक्ष-किंपुरुषादिकृतनृसिंहस्तुतिः । अन्ते प्रह्लादेन सविस्तरं नरसिंहस्तुतिः, प्रसन्नेन हरिणा वरप्रदानं, ततो भगवदाज्ञया राज्यपरिपालनम् । प्रह्लादो वाय्वावेशकाले नारदाधमः, आवेशाभावे कर्मदेवसमः । प्रह्लादचरितसमाप्तिः ।

## अध्यायः-४१

गङ्गा प्रह्लादादधमा विष्णुपदीति तस्या नाम, त्रिविक्रम वामपादाङ्गुष्ठजाता, रुद्रोऽपि कालकूटविषं असहिष्णुः स्वशिरसि एनां दध्रे, तस्याः चत्वारि रूपाणि-महाभिषक्पत्नी-अभिषेचनी, शंतनु-गङ्गा, सुषेण (वरुणवानर)-सुषेणा, मण्डूकभार्या-मण्डूकिनीति ।

पर्जन्यशब्दार्थः, लिङ्गादिकं पोषितव्यं न पोषितव्यं च, रामावतारे शरभनामकवानरः, शामलाशब्दार्थविवरणं, मलं लोहपात्रे भवति, अतो वैष्णवैस्तत्त्याज्यमेव, दग्ध-जीर्ण-पुराणवस्त्रादि नैव धार्यं, पलाण्डु-पिण्याक-तुल्वबिल्वे-दीर्घतक्रं-स्वादुहीनं कलिभार्या प्रियम् । शामला-रोहिणी बभूव-युधिष्ठिरेण विवाहः । चन्द्रभार्या-रोहिणी, आदित्यभार्या संज्ञा, गङ्गादयः षट् समाः, ताभ्यः स्वाहा-स्वधे अवरे, चन्द्रपुत्रबुधः-अभिमन्युः, अश्विभार्या उषा, नकुलभार्या शल्यात्मजा, पृथिव्यभिमानी-शनैश्चरः, कर्मपः-पुष्करः, हरिप्रीतिकरधर्मविवरणं-प्रातः नारायणस्मरणं, विण्मूत्र-केशव, शौच-त्रिविक्रम, गोदोहन-गोपाल, तुलसी, गो आदीनां माहात्म्यवर्णनं, स्तनपानबालकृष्ण, मृत्तिकास्नान-वराह, शङ्ख, चक्र, गदा, पद्म, नारायणमुद्राः, वस्त्रधारण-

उपेन्द्र, होम-परशुराम, तीर्थप्राशन-कृष्ण, राम, वासुदेव, शाकभक्षण-धन्वन्तरी, दुग्धान्न, फल, तैल, पानक, प्रयाण, पुत्रादिचुम्बन, ताम्बूल, शय्या, निद्रा-गान, तुलसीछेदन-पुष्पच्छेदन, प्रदक्षिण, प्रणाम, कर्मपूर्ति इत्यादि तत्तत् कालेषु स्मर्तव्यभगवद्रूपाणां नामनिर्देशः, समाप्तिश्च ।

# ॥ अथ गरुडपुराणम् ॥

## (ब्रह्मकाण्डः)

### ॥ प्रथमोऽध्यायः ॥

*मल्लानामशनिर्नृणां नरवरः स्त्रीणां स्मरो मूर्तिमान्
गोपानां स्वजनोऽसतां क्षितिभुजां शास्ता स्वपित्रोः शिशुः ।
मृत्युर्भोजपतेः विधातृविहितस्तत्त्वं परं योगिनां
वृष्णीनां च पतिः सदैव शुशुभे रंगेऽच्युतः साग्रजः ॥ १ ॥
नमो नारायणायेति[१] तस्मै वै[२] मूलरूपिणे ।
नमस्कृत्य[३] प्रवक्ष्यामि नारायणकथामिमाम् ॥ २ ॥
शौनकाद्या महात्मानो ह्यृषयो[४] ब्रह्मवादिनः ।
नैमिषाख्ये महापुण्ये[५] तपस्तेपुर्महत्तरम् ॥ ३ ॥
जितेन्द्रिया जिताहाराः सन्तः सत्यपरायणाः ।
यजन्तः परया भक्त्या विष्णुमाद्यं जगद्गुरुम् ॥ ४ ॥
यज्ञैर्यज्ञपतिं केचित् ज्ञानैर्ज्ञानात्मकं परम् ।
केचित्परमया[६] भक्त्या नारायणमपूजयन् ॥ ५ ॥
एकदा तु महात्मानः समाजं चक्रुरुत्तमाः ।
धर्मार्थकाममोक्षाणामुपायं ज्ञातुमिच्छवः ॥ ६ ॥
षड्विंशतिसहस्राणि[७] मुनीनामूर्ध्वरेतसाम् ।
तेषां शिष्यप्रशिष्याणां संख्या वक्तुं न शक्यते ॥ ७ ॥
मुनयो भावितात्मानो मिलितास्ते महौजसः ।
लोकानुग्रहकर्तारो वीतरागा विमत्सराः ॥ ८ ॥

---

पाठान्तर-१.नारायणायैव । २. तस्मै ते । ३. नमस्कृत्वा । ४. ऋषयो । ५. महारण्ये । ६.केचित्तु परया । ७. सहस्राणां । * अयं श्लोकः रामतत्त्वप्रकाशनपुस्तके दृश्यते । अन्यत्र न ।

